# ದೇವಾಲಯ ರಹಸ್ಯಗಳು



ಗ್ರಂಥಕರ್ತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (82) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

## ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org





# ದೇವಾಲಯ ರಹಸ್ಯಗಳು


**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 100/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು-ಪಾದರಸಮು.
05. ಯುಗಮು-ಯೋಗಮು.
06. ನೈಜಂ-ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ-ಸೈತ್ಯಂ.
09. ಶೈವಮು-ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ-ಸೃಷ್ಠಿಕರ್ತ.
12. ಕಾಯ-ಪಂಡು-ಕಾಯ.
13. ಜ್ಞಾನಮು-ವಿಜ್ಞಾನಮು.
14. ವಾರ-ಮಾಸ-ವತ್ಸರ.
15. ಸೇಕೂವಲಿ-ಕೂಲಿಸೇವಾ.
16. ಧರ್ಮಮು-ಅಧರ್ಮಮು.
17. ಏಕ್‌ನಿರಂಜನ್-ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ-ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು - ಆರ್ಯುಲು.
22. ಪ್ರಭುವು - ಪ್ರಭುತ್ವಂ.
23. ಭೂತಂ - ಮಹಾಭೂತಂ.
24. ಪ್ರಭು - ಪ್ರಜ.
25. ಯಾದವ್.
26. ಪುಸ್ತಕಮು-ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ-ವಿಕೃತಿ.
29. ಮಾಟ-ಮಂದು.
30. ಏಕತ-ಏಕಾಗ್ರತ.
31. ಹರಿಕಾಲು-ಹರಿಚೇಯಿ.
32. ಪುಟ್ಟಗೋಸಿ-ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ-ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು-
ಅಮಾಯಕುಡು.
37. ಮರಣಮು-ಶರೀರಮು.
38. ದ್ವಿತೀಯುಡು-ದ್ವಿತೀಯುಡು.
39. ಎದಮೀದಮುದ್ರ-
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ-
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ-
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು-
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ -
ಗುರುವು ದೈವಮು.
48. ಕಲಿಯುಗಮು.
49. ಮತಮು-ಪಥಮು.
50. ದಿವ್ಯಖುರಾನ್-ಹದೀಸು.
51. ತಲ್ಲಿ.
52. ಪುಟ್ಟುಟ - ಗಿಟ್ಟುಟ.
53. ಗೋರು - ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು - ಹಿಂದುವು.
61. ಸ್ತ್ರೀ-ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
ಓಉಖ ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ವಿಷಯ ಸೂಚಿಕೆ

# ವಿಷಯ ಸೂಚಿಕೆ

# ರಚನಕಾರರ ಮೊದಲ ಮಾತು 

ದೇವಾಲಯ ಎಂದರೆ ದೇವರಿರುವ ಒಂದು ಆಲಯ. ದೇವರು ಒಬ್ಬನೇ ಎಂದು ಜ್ಞಾನ ತಿಳಿದವರು ಹೇಳುವುದನ್ನು ಕೇಳಿಯೇ ಇದ್ದೇವೆ. ದೇವರು ಒಬ್ಬನೇ ಆದಾಗ ಒಬ್ಬನೇ ದೇವರ ಆಲಯವಿರದೇ ಅನೇಕ ವಿಧವಾದ ದೇವತೆಗಳೊಂದರ ದೇವಾಲಯಗಳು ಇರುವುದು ನೋಡುತ್ತಲೇ ಇದ್ದೇವೆ. ಇದರಲ್ಲಿ ಆ ಒಬ್ಬನೇ ದೇವರು ಯಾರು ಎಂಬ ಪ್ರಶ್ನೆ ಬಾರದೇ ಇರುವುದಿಲ್ಲ. ಎಷ್ಟೋ ವಿಧಗಳ ದೇವಾಲಯಗಳಲ್ಲಿ ಯಾರು ನಿಜವಾದ ದೇವರು ಎಂಬ ಪ್ರಶ್ನೆ ಸಹ ಬರುತ್ತದೆ. ಎಲ್ಲವನ್ನೂ ಮೀರಿಸಿದ ಪ್ರಶ್ನೆ ದೇವರು ಯಾರು ಎಂಬುದು. ದೇವರು ಯಾರು ಎನ್ನುವುದಕ್ಕೆ, ಯಾವುದು ದೇವಾಲಯ ಎನ್ನುವುದಕ್ಕೆ ಸಮಾಧಾನವನ್ನು ತಿಳಿದುಕೊಳ್ಳಬೇಕಾಗಿದೆ. ಇಷ್ಟು ದೊಡ್ಡ ಪ್ರಶ್ನೆಗಳಿಗೆ ಒಂದೇ ಮಾತಿನಲ್ಲಿ ಉತ್ತರ ಯಾರು ಹೇಳಲಾರರು. ಮನುಷ್ಯನಿಗೆ ದೇವರು ತಿಳಿಯಬೇಕೆಂದರೆ ಎಷ್ಟೋ ವಿವರಗಳನ್ನು ತಿಳಿಯಬೇಕು. ದೇವರನ್ನು ತಿಳಿಸುವ ಸಲುವಾಗಿ ಪೂರ್ವದಲ್ಲಿ ಜ್ಞಾನಿಗಳು ಇಟ್ಟಿರುವವೇ ದೇವಾಲಯಗಳು. ದೇವರು ಒಬ್ಬನೇ, ದೇವಾಲಯವೂ ಸಹ ಒಂದೇ. ದೇವರನ್ನು ತಿಳಿದುಕೊಳ್ಳುವ ಪದ್ಧತಿಗಳು ಮಾತ್ರ ಎರಡು ವಿಧಗಳಾಗಿ ಇವೆ. ದೇವರನ್ನು ನಿರಾಕಾರವಾಗಿ ಮತ್ತು ಸಾಕಾರವಾಗಿ ತಿಳಿದುಕೊಳ್ಳುವುದೇ ಎರಡು ವಿಧಗಳು. ನಿರಾಕಾರವಾಗಿ ತಿಳಿಸುವ ಉದ್ದೇಶದಿಂದ ನಿರ್ಮಿಸಿದ ದೇವಾಲಯ **ಮೂಗು ಮುಖವಿಲ್ಲದ ಈಶ್ವರಲಿಂಗ ದೇವಾಲಯ**. ಭೂಮಿಯ ಮೇಲೆ ದೇವಾಲಯ ಸಂಪ್ರದಾಯವು ಲಿಂಗ ದೊಂದಿಗೇ ಪ್ರಾರಂಭವಾಗಿದೆ. ನಿರಾಕಾರ, ಸಾಕಾರ ರೂಪಗಳಲ್ಲಿ ನಿರಾಕಾರ ವಾದದ್ದು ಲಿಂಗವಾದರೆ ಸಾಕಾರವಾದ ಆಲಯ ರೂಪವಿರುವ ಪ್ರತಿಮೆಯೊಂದಿಗೆ ಪ್ರಾರಂಭವಾಗಿದೆ. ಭೂಮಿಯ ಮೇಲೆ ಎರಡನೆಯ ದೇವಾಲಯವು **ಶಂಖು, ಚಕ್ರ ಹೊಂದಿದ್ದು ಹಣೆಯಲ್ಲಿ ನಾಮವಿರುವ ಪ್ರತಿಮೆಯಿರುವ ಆಲಯವಾಗಿದೆ.** ಪೂರ್ವದಲ್ಲಿ ಪ್ರಪಂಚದಲ್ಲಿಯೇ ದೇವಾಲಯಗಳು ಎರಡೇ ವಿಧಗಳಾಗಿದ್ದವು. ಸಾವಿರ, ಲಕ್ಷ ಸಂವತ್ಸರಗಳು ಕಳೆಯುವುದರೊಳಗೆ ಎಷ್ಟೋ ಲೆಕ್ಕವಿಲ್ಲದಷ್ಟು ದೇವಾಲಯಗಳು ಸೃಷ್ಟಿಸಲ್ಪಟ್ಟಿವೆ.

ದೇವರನ್ನು ತಿಳಿಸುವ ಉದ್ದೇಶದಿಂದ ನಿರಾಕಾರ, ಸಾಕಾರಗಳ ಪದ್ಧತಿಯಲ್ಲಿ ಮೊದಲು ಎರಡೇ ಎರಡು ದೇವಾಲಯಗಳನ್ನು ಪೂರ್ವದಲ್ಲಿ ಜ್ಞಾನಿಗಳು ತಯಾರುಮಾಡಿ ಇಟ್ಟರೆ ಈಗಿನ ಕಾಲಕ್ಕೆ ನೂರರ ಸಂಖ್ಯೆಯಲ್ಲಿ ತಯಾರಾಗಿವೆಯೆಂದು ಹೇಳಬಹುದು. ಪೂರ್ವದಲ್ಲಿ ನಿರ್ಮಿಸಿದ ಲಿಂಗ, ಪ್ರತಿಮೆಯ ಆಲಯಗಳು ದೈವವನ್ನು ತಿಳಿಸುವ ಅರ್ಥದಿಂದ ಕೂಡಿಕೊಂಡಿದ್ದರೆ ನಂತರ ತಯಾರಾದವುಗಳು ಅರ್ಥರಹಿತವಾಗಿ ಹೋಗಿವೆ. ಪೂರ್ವದ ದೇವಾಲಯಗಳು ಸಂಪ್ರದಾಯವಾಗಿ ನಿರ್ಧಿಷ್ಟವಾಗಿ ಹೀಗೆಯೇ ಕಟ್ಟಬೇಕೆಂದು ಕಟ್ಟುತ್ತಿದ್ದರು. ಈಗ ಇಂತಹ ನಿರ್ಧಿಷ್ಟತೆಯನ್ನು ಯಾರು ಪಾಟಿಸುತ್ತಿಲ್ಲ ಎಂದು ಹೇಳಬಹುದು. ಅವರವರ ಇಷ್ಟದ ಪ್ರಕಾರ ಅವರು ಕಟ್ಟುತ್ತಿದ್ದಾರೆ. ಕೊನೆಗೆ ಸಣ್ಣದೊಂದು ಗೂಡು ಕಟ್ಟಿ ಅದರಲ್ಲಿ ಸಣ್ಣಕಲ್ಲೊಂದನ್ನು ಇಟ್ಟರೂ ಅದು ಒಂದು ದೇವಾಲಯವಾಗುತ್ತಿದೆ. ಈ ವಿಧವಾಗಿ ಅನೇಕ ವಿಧವಾದ ದೇವಾಲಯ ಗಳು ತಯಾರಾಗಿ ಮಾನವರಲ್ಲಿ ಪೂರ್ವ ಕಾಲಕ್ಕು, ಇಂದಿಗೂ ಭಕ್ತಿ ಯಾವ ವಿಧವಾಗಿರುವುದೋ ಆಲೋಚಿಸಿ ನೋಡೋಣ.

ಭೂಮಿಯ ಮೇಲೆ ದೇವಾಲಯಗಳೆಲ್ಲ ಒಂದು ಭಾಗವಾದರೆ, ಅವುಗಳ ಬಳಿಗೆ ಹೋಗುವ ಭಕ್ತಾದಿಗಳೆಲ್ಲರೂ ಒಂದು ಭಾಗವಾಗಿದ್ದಾರೆ, ಭಕ್ತಾದಿಗಳಲ್ಲಿ ನಾಲ್ಕು ವಿಧಗಳ ಭಕ್ತಾದಿಗಳು ಇದ್ದಾರೆಂದು ಗೀತೆಯಲ್ಲಿ ಹೇಳಿರುವಂತೆ ಅವರವರ ಭಕ್ತಿಯನ್ನು ಅನುಸರಿಸಿ ಭಕ್ತಾದಿಗಳನ್ನು ವಿಭಜಿಸಿ ಹೇಳಬಹುದು. ಒಂದನೆಯವರು ಆರ್ಥರು, ಎರಡನೆಯವರು ಅರ್ಥಾರ್ಥರು, ಮೂರನೆಯವರು ಜಿಜ್ಞಾಸಿಗಳು, ನಾಲ್ಕನೆಯವರು ಜ್ಞಾನಿಗಳೆನ್ನುವವರ ಹಾಗೆ ಭಕ್ತರನ್ನು ಹೇಳಬಹುದು. ಈ ಕಾಲದಲ್ಲಿ ಆರ್ಥರು, ಅರ್ಥಾರ್ಥರು ಅನೇಕರು ಇದ್ದಾರೆ. ಜಿಜ್ಞಾಸಿಗಳು, ಜ್ಞಾನಿಗಳು ನಾಮ ಮಾತ್ರವೇ ಇದ್ದಾರೆ. ಆರ್ಥರು ಎಂದರೆ ಆಪತ್ತಿನಲ್ಲಿ ಮಾತ್ರವೇ ಕೈ ಮುಗಿಯುವವರು. ಅರ್ಥಾರ್ಥರೆಂದರೆ ಹಣಕ್ಕಾಗಿ ಕೈ ಮುಗಿಯುವವರು. ಪ್ರಸ್ತುತ ಕಾಲದಲ್ಲಿ ಆಪತ್ತಿನಲ್ಲಿ ಕೈ ಮುಗಿಯುವುದಕ್ಕೆ ಧನವನ್ನು ಹೊಂದಲು ಮಾತ್ರವೇ ದೇವಾಲಯಗಳಲ್ಲಿ ನಮಸ್ಕಾರಗಳೆಲ್ಲ ಇರುವುವು. ಬಂದಿರುವ ಆಪತ್ತನ್ನು

ದೂರಮಾಡಿಕೊಳ್ಳಲು ಮಾಡುತ್ತಿರುವ ವ್ಯಾಪಾರವನ್ನು, ಲಾಭ ಬರುವಂತೆ ಮಾಡಿ ಧನವಂತರನ್ನು ಮಾಡುವುದಕ್ಕೇ ಅಲ್ಲವೆ! ಗುಡಿಯಲ್ಲಿ ದೇವರಿದ್ದಾನೆಂಬ ಭಾವನೆಯಲ್ಲಿ ಎಲ್ಲರೂ ಇದ್ದಾರೆ. ದೇವಾಲಯವೆಂದರೆ ದೇವರೊಂದಿಗೆ ಕೋರಿಕೆಗಳನ್ನು ಭಿನ್ನವಿಸಿಕೊಳ್ಳುವ ಕೇಂದ್ರವೆಂದು ಅಂದುಕೊಳ್ಳುತ್ತಿದ್ದಾರೆ. ಕೋರಿಕೆಗಳು ಇದ್ದರೇನೇ ಅಲ್ಲವೆ! ಗುಡಿಗೆ ಹೋಗಬೇಕಾಗಿರುವುದು, ಕೋರಿಕೆಗಳು ಇಲ್ಲದಿದ್ದರೆ ಗುಡಿಯಿಂದ ಏನು ಕೆಲಸ, ಅದರಲ್ಲಿ ಇರುವ ದೇವರಿಂದ ಏನು ಕೆಲಸವಿರುತ್ತದೆ ಎಂದು ಹೇಳುತ್ತಿದ್ದಾರೆ. ಅಂತಹ ಭಾವನೆಯಿಂದಲೇ ಉದ್ಯೋಗಸ್ಥರು ಅವರ ಪ್ರಮೋಷನ್‌ಗಾಗಿ, ನಿರುದ್ಯೋಗಿಗಳು ಉದ್ಯೋಗಗಳಿಗಾಗಿ, ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಉತೀರ್ಣರಾಗಲು, ಯುವಕನು ಯುವತಿಗಾಗಿ, ಪೊಲೀಸ್ ಲಂಚಕ್ಕಾಗಿ, ಕಳ್ಳ ಕಳ್ಳತನ ಸುಲಭವಾಗಿ ನಡೆಯುವುದಕ್ಕಾಗಿ ಗುಡಿಯಲ್ಲಿನ ದೇವತೆಗಳಿಗೆ ಕೈ ಮುಗಿಯುತ್ತಲೇ ಇದ್ದಾರೆ. ದೇವರು ಅವರವರ ಕೆಲಸಗಳನ್ನು ಮಾಡಿಕೊಡುವ ಸ್ಥಿತಿಯಲ್ಲಿ ಇರುವವನೆಂದು, ಯಾವ ದೇವರಿಗಾದರೂ ನೈವೇದ್ಯ ಇರಬೇಕೆನ್ನುವಂತೆ, ಯಾವ ಕಾರ್ಯಕ್ಕಾದರೂ ಸ್ವಲ್ಪ ಹಣ ಲಂಚ ಕೊಟ್ಟಂತೆ ದೇವರಿಗೂ ಸಹ ಹರಕೆಗಳೆಂಬ ಹೆಸರಿನಿಂದ ಸ್ವಲ್ಪ ಮುಡುಪುಗಳ ರೂಪದಲ್ಲಿ ಲಂಚಕೊಟ್ಟು ತಮ್ಮ ಕೋರಿಕೆಗಳನ್ನು ನೆರವೇರಿಸಿಕೊಳ್ಳಬೇಕೆಂದುಕೊಳ್ಳುವವರು ಬಹಳ ಜನರಿದ್ದಾರೆ. ಇಂತಹ ಭಕ್ತರು ಗುಡಿಯಲ್ಲಿರುವ ದೇವರುಗಳನ್ನು ಸಹ ಅವನೀತಿ ಪರರನ್ನಾಗಿ ಮಾಡುತ್ತಿದ್ದಾರೆ. ತಮ್ಮ ಮನೆಯಲ್ಲಿನ ಚಿಕ್ಕಮಕ್ಕಳಿಗೂ ಸಹ ದೇವರ ಹತ್ತಿರ ಅದು ಕೊಡಬೇಕೆಂದು ಕೈಮುಗಿ, ಇದು ಬೇಕೆಂದು ಕೈ ಮುಗಿ ಎಂದು ಕಲಿಸಿಕೊಡುತ್ತಿದ್ದಾರೆ. ಕೋರಿಕೆಗಳಿಲ್ಲದ ಮಕ್ಕಳಿಗೆ ಅನ್ನ ಬೇಕೆಂದು ದೇವರಿಗೆ ಕೈ ಮುಗಿದು ಕೇಳಿಕೋ ಎಂದು ಕಲಿಸಿಕೊಡುತ್ತಿದ್ದಾರೆ. ಈ ವಿಧವಾಗಿ ದೇವಾಲಯಗಳ ಬಳಿ ಕೋರಿಕೆಗಳ ಭಕ್ತಿ ತಾರಾಮಟ್ಟಕ್ಕೇರಿದೆ. ಪ್ರಸ್ತುತ ಈ ಕಾಲದಲ್ಲಿ ದೇವರೆಂದರೆ ಏನು? ದೇವಾಲಯವೆಂದರೆ ಏನು? ಎಂಬ ವಿಷಯ ಶಾಸ್ತ್ರಬದ್ಧವಾಗಿ, ಹೇತುಬದ್ಧವಾಗಿ ತಿಳಿಯ ಬಯಸುವ ಉದ್ದೇಶವೇ ಈ "**ದೇವಾಲಯ ರಹಸ್ಯಗಳು**" ಎಂಬ ಗ್ರಂಥ ನಮ್ಮಿಂದ ತಯಾರಾಗಿದೆ. ಪೂರ್ವದಲ್ಲಿ ಮೊದಲನೆಯದಾದ ಈಶ್ವರ

ಲಿಂಗ, ಎರಡನೆಯದಾದ ಶಂಖು, ಚಕ್ರ, ನಾಮಗಳ ಪ್ರತಿಮೆ ಯಾವ ಉದ್ದೇಶದಿಂದ ಇಡಲಾಗಿದೆಯೋ ಆ ಉದ್ದೇಶವನ್ನು ಯಥಾರ್ಥವಾಗಿ ತಿಳಿಸುವ ಸಣ್ಣ ಪ್ರಯತ್ನವೇ ಈ ಗ್ರಂಥವೊಂದರ ಅಂತರಾರ್ಥ. ದೇವಾಲಯ ನಿರ್ಮಾಣದಲ್ಲಿರುವ ಗೋಪುರ, ಧ್ವಜಸ್ತಂಭ, ಗಂಟೆ, ಪ್ರತಿಮೆ, ಪ್ರತಿಮೆ ತೋರಿಸುವ ಹಸ್ತ, ಶಂಖು, ಚಕ್ರ, ಹಣೆಯ ಮೇಲಿನ ನಾಮ ಎಲ್ಲವನ್ನೂ ಕುರಿತು ತಿಳಿಸುತ್ತಾ ಮನುಷ್ಯ ಆರಾಧಿಸಬೇಕಾಗಿರುವ ಆರಾಧನೆಯೊಂದರ ಅರ್ಥಗಳನ್ನು ಕುರಿತು ಹೇಳುವುದು ಈ ಗ್ರಂಥದಲ್ಲಿನ ನಮ್ಮ ಮುಖ್ಯ ಉದ್ದೇಶವಾಗಿರುತ್ತದೆ. ನಿಜ ನಿಷ್ಠೂರದಿಂದ ಕೂಡಿರುತ್ತದೆಂದು ಹಿರಿಯರು ಹೇಳಿರುವಂತೆ ಕೆಲವರಿಗೆ ನಮ್ಮ ಮಾತುಗಳು ಇಷ್ಟವಾಗದೇ ಇರಬಹುದು. ಮಧ್ಯದಲ್ಲಿ ಬಂದಿರುವ ಆಚರಣೆಗಳು ಅವರಿಗೆ ಮೆಚ್ಚುಗೆಯಾಗಿ ಅವೇ ಸತ್ಯವೆಂದು ತಿಳಿದುಕೊಂಡಿರಬಹುದು. ಆ ಪದ್ಧತಿಯಲ್ಲಿಯೇ ಒಂದು ಪುಸ್ತಕವನ್ನು ಬರೆದುಕೊಂಡು ಕೆಲವು ಇಂತಹ ಪುಸ್ತಕದಲ್ಲಿ ಇವೆಯೆಂದು ಅರ್ಥವಿಲ್ಲದ ಆಚಾರಗಳನ್ನು ಹೇಳಿಕೊಳ್ಳುತ್ತಿದ್ದಾರೆ. ಉದಾಹರಣೆಗೆ ಹಸುವಿನ ತುಪ್ಪದಿಂದ ಬತ್ತಿಗಳ ಹಾರತಿ ಕೊಡಬೇಕೆಂದು ಹಸುವಿನ ತುಪ್ಪ ಪವಿತ್ರವಾದುದೆಂದು ಬರೆದುಕೊಂಡಿದ್ದಾರೆ. ನಾವು ಹೇಳಿದ ಕರ್ಪೂರದ ಹಾರತಿಗೆ ವಿರುದ್ಧವಾಗಿ ಹೇಳಿಕೊಂಡಿದ್ದಾರೆ. ಹಾರತಿ ಎಂದರೆ ಆಗಿ ಹೋಗುವುದು ಎಂದು ಅರ್ಥ. ಕರ್ಪೂರದ ಹಾರತಿಯಲ್ಲಿ ಕರ್ಪೂರವು ಮುಗಿದು ಹೋಗುತ್ತಿದೆ. ಆದ್ದರಿಂದ ಹಾರತಿ ಎಂಬುದು ಕರ್ಪೂರಕ್ಕೇ ಸಲ್ಲುತ್ತದೆ ಹೊರತು ಹತ್ತಿಯಿಂದ ಮಾಡಿದ ಬತ್ತಿಗಳು ಹಸುವಿನ ತುಪ್ಪಕ್ಕೆ ಹೇಗೆ ಅನ್ವಯಿಸುತ್ತವೆ. ಇದು ಧರ್ಮವಾ ಅಧರ್ಮವಾ ಎಂದುಕೊಳ್ಳದೇ ಪುಸ್ತಕಗಳೆಲ್ಲವನ್ನು ಶಾಸ್ತ್ರಗಳೆಂದು ತಿಳಿದು ಇಂತಹ ಶಾಸ್ತ್ರದಲ್ಲಿ ಹೇಳಿದ್ದಾರೆ ಎನ್ನುವುದು ಸಮ್ಮತವೇನಾ? ಯಾರು ಎಷ್ಟು ಹೇಳಿಕೊಂಡರು ವಾಸ್ತವವಲ್ಲದ ವಿಷಯಗಳನ್ನು ಬಿಟ್ಟು ಹಾಕುವುದು ನಮ್ಮ ಕರ್ತವ್ಯವಾಗಿ ಇಟ್ಟುಕೊಳ್ಳಬೇಕು. ಆದ್ದರಿಂದ ನಾವು ಎಷ್ಟೋ ಜನರು ಆಚರಿಸುತ್ತಿರುವ ತಪ್ಪು ಆಚರಣೆಗಳನ್ನು ಖಂಡಿಸುತ್ತಾ ವಾಸ್ತವ ವಿಷಯಗಳನ್ನು ವಿವರಿಸುತ್ತ ಹೋಗುತ್ತಿದ್ದೇವೆ. ಎತ್ತು ಈದಿದೆ ಎಂದರೆ ಅದನ್ನು ಗ್ವಾದಲಿಗೆ ಕಟ್ಟಿದ್ದೇವೆ

ಎಂದರೆ ಅದು ಎಷ್ಟು ದೊಡ್ಡವರು ಹೇಳಿದರೂ ಕುರುಡರಂತೆ ನಂಬದೆ ವಿಮರ್ಶಿಸಿ ಎತ್ತು ಈಯುವುದಿಲ್ಲ ಎಂದು ನಿರೂಪಿಸಿ ಈಯುವುದು ಹಸು ಮಾತ್ರವೇ ಎಂದು ಹೇಳಬೇಕು. ಹಾಗೆಯೇ ನಮಗೆ ತಿಳಿದಿರುವುದೇ ಜ್ಞಾನ ಎಂದು ಕೊಳ್ಳುವವರನ್ನು ಖಂಡಿಸುತ್ತಾ ನಿಮಗೆ ತಿಳಿಯದೇ ಇರುವುದೂ ಸಹ ಇದೆಯೆಂದು ವಿವರಿಸುತ್ತಾ ಹೋಗುವುದು ನಡೆದಿದೆ. ಮಾಯಾ ಗುರುಗಳಿಂದ ನಮಗೆ ಸ್ವಲ್ಪ ಕಷ್ಟವಾದರೂ ಸತ್ಯವನ್ನು ಪ್ರಕಟಿಸುವುದರಲ್ಲಿ ತಪ್ಪಿಲ್ಲವೆಂದು, ನೀವು ಮಾಡುತ್ತಿರುವ ಪೂಜೆಗಳಲ್ಲಿ ಅರ್ಥವಿಲ್ಲವೆಂದು ಪ್ರತಿಮೆಯನ್ನು ಅಸಲಾದ ಭಾವನೆಯಿಂದ ನೋಡಲಿಲ್ಲವೆಂದು ತಿಳಿಸಿದ್ದೇವೆ. ಒಂದು ವಿಷಯ ತಿಳಿಯದಿರು ವಾಗಲೇ ರಹಸ್ಯವಾಗುತ್ತದೆಂದು ಈಗ ದೇವಾಲಯ ವಿಷಯಗಳು ತಿಳಿಯದಂತೆ ಹೋಗುವುದರಿಂದ ಅವು ರಹಸ್ಯಗಳಾಗಿವೆಯೆಂದು ಆ ವಿಷಯಗಳೆಲ್ಲವನ್ನು ಕೂಡಿಸಿ **"ದೇವಾಲಯ ರಹಸ್ಯ"**ಗಳೆಂದು ಹೆಸರು ಇಟ್ಟಿದ್ದೇವೆ. ಪ್ರತಿಯೊಂದು ವಿಷಯಕ್ಕೂ ವಿವರಣೆಯನ್ನು ಕೊಡುತ್ತ ರಹಸ್ಯಗಳೆಲ್ಲವನ್ನೂ ಸಾಧ್ಯವಾದಷ್ಟು ಮಟ್ಟಿಗೆ ವಿವರಿಸಿ ಹೇಳುವುದು ನಡೆದಿದೆ. ನೀವು ಹೇಳಿರುವುದು ನಮ್ಮ ಆಗಮ ಶಾಸ್ತ್ರದಲ್ಲಿ ಇಲ್ಲ ನಾವು ನಂಬುವುದಿಲ್ಲ ಎನ್ನುವವರೂ ಸಹ ಇದ್ದಾರೆ. ನಾವು ಎಲ್ಲರನ್ನೂ ನಂಬಬೇಕೆಂದು ಎಲ್ಲಿಯೂ ಹೇಳಲಿಲ್ಲ, ನಿಮಗೆ ಯಾವುದು ನಿಜವೆಂದು ಅನ್ನಿಸುತ್ತದೆಯೋ ಅದನ್ನೇ ನಂಬಿರಿ. ಹೇಳುವುದು ನಮ್ಮ ಕರ್ತವ್ಯ ಆದ್ದರಿಂದ ಹೇಳಿದ್ದೇವೆ.

**ಇಂತಿ**

**ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀಶ್ರೀಶ್ರೀ ಆಚಾರ್ಯ ಪ್ರಭೋದಾನಂದ ಯೋಗೀಶ್ವರರು**

# 1. ದೇವಾಲಯ ರಹಸ್ಯಗಳು

ದೇವಾಲಯವೆಂದರೆ ದೇವರ ಒಂದು ನಿವಾಸ ಸ್ಥಳವೆಂದು ಎಲ್ಲರಿಗೂ ಅರ್ಥವಾಗುತ್ತದೆ. ದೇವಾಲಯದಲ್ಲಿ ದೇವರ ಪ್ರತಿಮೆ ಇರುತ್ತದೆ. ಉದ್ದ ಕುಳ್ಳ ಬಣ್ಣ ರೂಪಗಳಿಂದಿರುವ ಪ್ರತಿಮೆಯನ್ನು ನಾವೆಲ್ಲರೂ ದೇವರೆಂದು ನಂಬಿ ಪೂಜಿಸಿ ನಮಸ್ಕರಿಸುತ್ತಿದ್ದೇವೆ. ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಎಲ್ಲರಲ್ಲಿಯೂ ವ್ಯಾಪಿಸಿಕೊಂಡಿರುವವನು ದೇವರು, ಎಲ್ಲಾ ಕಡೆ ಇರುವವನು ದೇವರು. ಶರೀರಾಂತರ್ಗತವಾಗಿ ಚಲನ ಶಕ್ತಿಯನ್ನು ಕೊಡುತ್ತಿರುವ ಆತ್ಮವೇ ದೇವ ರಾಗಿರುವಾಗ, ನಾಲ್ಕು ಗೋಡೆಗಳ ಮಧ್ಯೆ ಇರುವ ಪ್ರತಿಮೆ ದೇವರಾ? ಎಂಬ ಅನುಮಾನ ಬಾರದೇ ಇರುವುದಿಲ್ಲ. ಕಣ್ಣಿಗೆ ಕಾಣಿಸುವ ರೂಪವಿಲ್ಲದವನು ದೇವರೆಂಬ ಶಾಸ್ತ್ರವಚನ ಇರುವಾಗ, ಕಣ್ಣಿಗೆ ಸ್ಪಷ್ಟವಾಗಿ ತಿಳಿಯುವ ಪ್ರತಿಮೆಯೇನಾ ದೇವರು ಎಂಬ ಅನುಮಾನ ಬಾರದೇ ಇರುವುದಿಲ್ಲ.

ದೇವಾಲಯಗಳು ಪೂರ್ವಕಾಲದಲ್ಲಿ ನಿರ್ಮಿಸಿದವುಗಳೇ ಆಗಿದ್ದರೆ ಅಂದಿನ ಬ್ರಹ್ಮರ್ಷಿಗಳು (ದೇವರನ್ನು ಅರಿತವರು) ಏತಕ್ಕಾಗಿ ದೇವಾಲಯಗಳನ್ನು ನಿರ್ಮಿಸಿದ್ದಾರೆ? ದೇವರಿಗೆ ಆಕಾರವಿಲ್ಲವೆಂದು ಉದ್ಬೋಧಿಸಿದವರೇ ಆಕಾರ ಸಹಿತವಾಗಿ ನಿರ್ಮಿಸಲು ಕಾರಣವೇನು? ಸರ್ವ ಪ್ರಪಂಚಕ್ಕೂ, ಸರ್ವ ಜೀವರಾಶಿಗಳಿಗೂ ಅಧಿಪತಿ (ದೇವರು) ಒಬ್ಬನೇ ಎಂದು ತಿಳಿದವರು ವಿವಿಧ ದೇವಾಲಯಗಳನ್ನು ಸೃಷ್ಟಿಸಿ ಅದರಲ್ಲಿ ವಿಭೂತಿ ರೇಖೆಗಳ ದೇವರೆಂದು, ನಾಮವಿರುವ ದೇವರೆಂದು ಹೆಸರಿಟ್ಟು ತೋರಿಸಿರುವುದೇಕೆ? ದೇವರು ನಿರ್ಗುಣ, ನಿರಾಕಾರನಾಗಿರುವಾಗ ಸಾಕಾರ ಪ್ರತಿಮೆಗಳು ಏತಕ್ಕಾಗಿ? ಸಗುಣೋಪಾಸನೆ ಏತಕ್ಕೆ? ಈ ವಿಧವಾಗಿ ಮಾನವನ ಬುದ್ಧಿಗೆ ಎಷ್ಟೋ ಪ್ರಶ್ನೆಗಳು ಉದ್ಭವಿಸಿದಾಗ ಅವುಗಳಿಗೆ ಸರಿಯಾದ ಸಮಾಧಾನ ಲಭಿಸುತ್ತಿಲ್ಲ. ಸಮಾಧಾನ ಲಭಿಸದಿರುವಾಗ ಮಾನವನು ನಾಸ್ತಿಕನಾಗಿ ಪರಿವರ್ತನೆಯಾಗುವುದಕ್ಕೆ ಅವಕಾಶವಿದೆ. ಬಹಳ ಜನ ಜ್ಞಾನವೆಂಬುದನ್ನರಿಯದ ಸ್ಥಿತಿಯಲ್ಲಿದ್ದು, ಒಬ್ಬರು ಯಾವ ವಿಧದಲ್ಲಿ ಮಾಡುತ್ತಿದ್ದರೆ ಅದೇ ವಿಧದಲ್ಲಿ ಮಾಡುತ್ತಾ ಹೋಗುವವರಿದ್ದಾರೆ. ಆದ್ದರಿಂದ ನಿರಾಕಾರ ಸಾಕಾರ ವ್ಯತ್ಯಾಸವೇನೂ ತಿಳಿಯದವರು ಏನನ್ನೂ ವಿವರಿಸಿಕೊಳ್ಳುವ

ಶಕ್ತಿಯಿಲ್ಲದೆ ತಾವು ಮಾಡುತ್ತಿರುವುದೇ ಪೂಜೆಯೆಂದು, ತಾವು ಆರಾಧಿಸುವವನೇ ದೇವರೆಂದು, ಕೋರಿಕೆಗಳನ್ನು ಕೋರುವುದೇ ತಮ್ಮ ಕೆಲಸವೆಂದು, ಅವುಗಳನ್ನು ನೆರವೇರಿಸುವುದೇ ದೇವರ ಧ್ಯೇಯವೆಂದು, ಅದರ ಸಲುವಾಗಿಯೇ ದೇವಾಲಯಗಳು ನಿರ್ಮಿಸಲ್ಪಟ್ಟಿವೆಯೆಂದು, ಅದರಲ್ಲೂ ಒಂದೊಂದು ದೇವಾಲಯದಲ್ಲಿನ ದೇವರು ಕೋರಿಕೆಗಳನ್ನು ಬೇಗನೇ ನೆರವೇರಿಸುವನೆಂದು, ಆದ್ದರಿಂದ ಆಯಾ ದೇವರುಗಳಿಗೆ ವಿಶೇಷವಾಗಿ ಕಾಣಿಕೆಗಳು, ಪೂಜೆಗಳು ನಡೆಯುತ್ತಿವೆಯೆಂದು ಹೇಳಿಕೊಳ್ಳುತ್ತಿದ್ದಾರೆ. ಯಾರೇನು ಅಂದುಕೊಂಡರೂ ಸತ್ಯವಾದುದು ನಿತ್ಯವಾದುದು ಶಾಸ್ತ್ರ. ಶಾಸನಗಳಿಂದ ಕೂಡಿಕೊಂಡಿರುವುದೇ ಶಾಸ್ತ್ರವಾದಾಗ, ಸಿದ್ಧಾಂತ ರೂಪವಾಗಿರುವುದೇ ಶಾಸ್ತ್ರವಾದಾಗ, ಅನುಭವ ರೂಪವಾಗಿರುವುದೇ ಶಾಸ್ತ್ರವಾದಾಗ, ಶಾಸ್ತ್ರಾನುಸಾರವಾಗಿ ದೇವರು ಎಲ್ಲರಲ್ಲಿರುವವನೇ, ಶಾಸ್ತ್ರಾನುಸಾರವಾಗಿ ದೇವರು ಕಾಣಿಸದವನೇ, ಹಾಗಾದರೆ ನಮಗೆ ಕಾಣಿಸುತ್ತಿರುವ ದೇವಾಲಯಗಳು ನಿರರ್ಥಕವಾ? ಎಷ್ಟೋ ಶ್ರಮ, ಧನವ್ಯಯದಿಂದ ನಿರ್ಮಿಸಿದ ದೇವಾಲಯಗಳು ಏತಕ್ಕಾಗಿ ಬ್ರಹ್ಮಜ್ಞಾನಿಗಳು ಬುದ್ಧಿ ಮಾಂದ್ಯದಿಂದ ನಿರ್ಮಿಸಿದ್ದಾರಾ? ಅನಾದಿಯಿಂದ ಇರುವ ದೇವಾಲಯಗಳಿಗೆ ಅರ್ಥವೇ ಇಲ್ಲವೇ?..... ಇದೆ. ಅನಾದಿಯಿಂದ ಇರುವ ದೇವಾಲಯಗಳಿಗೆ ಅರ್ಥ ಸಂಪೂರ್ಣವಾಗಿದೆ. ಆದರೂ ಈಗಿನ ಕಾಲದಲ್ಲಿ ತಿಳಿಯದೇ ಹೋಗಿದೆ. ಪೂರ್ವದಲ್ಲಿ ದೇವರನ್ನು ತಿಳಿದವರು ದೊಡ್ಡಬುದ್ಧಿಯನ್ನು ಉಪಯೋಗಿಸಿ ಮಾಡಿದ ಕೆಲಸವೇ ದೇವಾಲಯಗಳು. ಆದರೂ ಸ್ವಲ್ಪ ಕಾಲಕ್ಕೆ ಅವುಗಳ ಅರ್ಥ ತಿಳಿಯದೇ ಹೋಗಿದೆ. ಅದು ಸಹಜವಾಗಿ ಮಾಯೆಯ ಒಂದು ಕೆಲಸ "ಭಗವದ್ಗೀತೆಯ ಜ್ಞಾನಯೋಗ ವೆಂಬ ಅಧ್ಯಾಯ" ದಲ್ಲಿ

**1) ಶ್ಲೋಕ :** ***ಇಮಂ ವಿವಸ್ವತೆ ಯೋಗಮ್ ಪ್ರೋಕ್ತವಾನಹ ಮವ್ಯಯಮ್***
***ವಿವಸ್ವಾನ್ ಮನವೇ ಪ್ರಾಹ ಮನರಿಕ್ಷ್ವಾಕವೇ ಬ್ರವೀತ್ ॥***

**2) ಶ್ಲೋಕ :** ***ಏವಂ ಪರಂಪರಾ ಪ್ರಾಪ್ತ ಮಿಮಂ ರಾಜರ್ಷಯೋ ವಿದುಃ***
***ಸ ಕಾಲೇ ನೇಹ ಮಹತಾ ಯೋಗೋನಷ್ಟಃ ಪರಂತಪ ।***

"ನಾಶನವಿಲ್ಲದ ಈ ವಿದ್ಯೆಯನ್ನು ಮೊದಲು ಸೂರ್ಯನಿಗೆ ಹೇಳಿದ್ದೆನು, ಆತನು ಅದನ್ನು ಮನುವಿಗೆ ಹೇಳಿದನು. ಮನುವು ಇಕ್ಷ್ವಾಕನೆಂಬ ರಾಜನಿಗೆ ಹೇಳಿದನು. ಹೀಗೆ ಅದು ಒಬ್ಬರಿಂದ ಮತ್ತೊಬ್ಬರಿಗೆ ತಿಳಿಯುತ್ತಾ ಹೋಗಿ ಎಲ್ಲರಿಗೂ ತಿಳಿದಿರುವುದಾಗಿದೆ. ಬಹಳ ಕಾಲ ಕಳೆದು ಹೋಗಿ ಈ ಕಾಲಕ್ಕೆ ಆ ವಿಷಯ ತಿಳಿಯದೇ ಹೋಗಿದೆ." ಎಂದು ದೇವರು ಹೇಳಿದಂತೆ ಪೂರ್ವ ಕಾಲವಿದ್ದದ್ದು ತಿಳಿಯದೇ ಹೋಗಿರುವುದು ಸಹಜ. ಆದ್ದರಿಂದಲೇ ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತಿವೆ. ಅರ್ಥ ಅನರ್ಥವಾಗುತ್ತಿದೆ. ಧರ್ಮಗಳು ಅಧರ್ಮಗಳಾಗಿ ಬದಲಾದಾಗ ಅವುಗಳನ್ನು ಮತ್ತೆ ಧರ್ಮಗಳಾಗಿ ಪರಿವರ್ತಿಸುವುದು ಕರ್ತವ್ಯ. ಅರ್ಥವು ಅಪಾರ್ಥವಾಗಿ ಪರಿವರ್ತನೆಯಾದಾಗ ವಿವರಿಸಿ ಅರ್ಥ ಹೇಳುವುದು ಕರ್ತವ್ಯವಾಗಿದೆ. ಅಧರ್ಮಗಳನ್ನು ಧರ್ಮಗಳಾಗಿ ಪರಿವರ್ತಿಸುವುದು ಭಗವಂತನ ಕೆಲಸವಾದಾಗ ಅನರ್ಥಗಳಾಗಿರುವವುಗಳಿಗೆ ಅರ್ಥಗಳನ್ನು ಹೇಳಿಕೊಳ್ಳುವುದು ನಮ್ಮ ಕರ್ತವ್ಯ. ಭಗವದ್ಗೀತೆಯಲ್ಲಿ ಭಕ್ತಿ ಯೋಗವೆಂಬ ಅಧ್ಯಾಯದಲ್ಲಿ 10ನೇ ಶ್ಲೋಕವು"ಮತ್ಕರ್ಮ ಪರಮೋಭವ, ಮದರ್ಥ ಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ". ನನಗಾಗಿ ಕೆಲಸಗಳು ಮಾಡಿರಿ. ನನ್ನ ಕೆಲಸ ಮಾಡುವುದರಿಂದ ನಿನಗೆ ನನ್ನ ಸಾನ್ನಿಧ್ಯ ಎಂದರೆ (ಮೋಕ್ಷ) ಲಭಿಸುತ್ತದೆಂದು ಭಗವಂತನು ಹೇಳಿದ್ದಾನೆ. ವಿಶ್ವವ್ಯಾಪಿಯಾದ ಪರಮಾತ್ಮನು, ಸರ್ವ ಜೀವಿಗಳಿಗೆ ಅಧಿಪತಿಯಾದ ಪರಮಾತ್ಮನು ಅದೇ ಕೆಲಸವಾಗಿ ಮಾನವ ಅವತಾರದಲ್ಲಿ ಬಂದು ಧರ್ಮಗಳಿವು ಎಂದು ತಿಳಿಯಪಡಿಸಿದಾಗ ಮಾನವರಲ್ಲಿ ನಾನೊಬ್ಬ ಮಾನವನಾದ ಪ್ರಬೋಧಾನಂದನಾಗಿ ಗುರುಪ್ರಸಾದ ಹೊಂದಿದ ನಾನು ಬದಲಾಗಿ ಹೋಗಿರುವ ಅರ್ಥಗಳನ್ನು ಪುನಃ ವಿವರಿಸುವುದು ನನ್ನ ಕರ್ತವ್ಯವೆಂದುಕೊಂಡಿದ್ದೇನೆ. ಜ್ಞಾನ ಪ್ರಬೋಧನೆಯೇ ನನ್ನ ಜೀವನದ ಧ್ಯೇಯವಾಗಿರುವಾಗ ದೇವಾಲಯ ರಹಸ್ಯಗಳನ್ನು ವಿವರಿಸುವುದು ನನ್ನ ಧ್ಯೇಯದಲ್ಲಿ ಒಂದು ಭಾಗ.

ದೇವರು ಯಾರು ಎನ್ನುವುದು ಎಲ್ಲಕ್ಕಿಂತಲೂ ದೊಡ್ಡ ಪ್ರಶ್ನೆ ಮತ್ತು ಉತ್ತರವಿಲ್ಲದ ಪ್ರಶ್ನೆ ಎಂದು ಹೇಳಬಹುದು. ಏಕೆಂದರೆ ದೇವರು ಎಂಬ ಪದದಲ್ಲಿನ ಅರ್ಥ ಹುಡುಕುವವನು ಎಂದು ಇದೆ. ದೇವರು ಹುಡುಕಲ್ಪಡುವವನೇ ಹೊರತು ಕೈಗೆ ಸಿಗುವವನಲ್ಲ. ದೇವರ ವಿಷಯ ದೇವರಿಗೇ ತಿಳಿದಿದೆ. ಆದ್ದರಿಂದ ದೇವರೇ ಭೂಮಿಯ ಮೇಲೆ ಹುಟ್ಟಿ ತನ್ನನ್ನು ಹೊಂದಲು ಬೇಕಾಗಿರುವ ವಿವರವನ್ನು ತಿಳಿಸುವವನು. ಆ ವಿವರವನ್ನೇ ದೈವ ಜ್ಞಾನ ಎನ್ನುತ್ತೇವೆ. ಬೆಂಗಳೂರು ನಗರವನ್ನು ಸೇರಬೇಕೆಂದರೆ ಅದಕ್ಕೆ ಒಂದು ದಾರಿ ಇರುತ್ತದೆ ಮತ್ತು ಆ ದಾರಿಯಲ್ಲಿ ಗಮ್ಯವೊಂದರ ದೂರವನ್ನು, ಮಾರ್ಗವನ್ನು, ಮಾರ್ಗದಲ್ಲಿನ ತಿರುವುಗಳು, ಅಡ್ಡ ಇರುವ ನದಿಗಳು, ಉಬ್ಬು ತಗ್ಗುಗಳು ಅಪಾಯಗಳು ನಡೆಯುವ ಸ್ಥಳಗಳನ್ನು ತೋರಿಸುವ ಸೂಚನೆಗಳು ಎಷ್ಟೋ ಇರುತ್ತವೆ. ಇವುಗಳನ್ನೆಲ್ಲಾ ತಿಳಿದು ಅವುಗಳನ್ನು ದಾಟಿ ಹೋದಾಗಲೇ ಬೆಂಗಳೂರು ಗಮ್ಯವನ್ನು ಸೇರುತ್ತೇವೆ. ಅದೇ ರೀತಿಯಾಗಿ ದೇವರನ್ನು ಸೇರಲು, ಮುಕ್ತಿ ಎಂಬ ಗಮ್ಯವನ್ನು ಸೇರುವುದಕ್ಕೆ ಎಷ್ಟೋ ಸೂಚನೆಗಳು ಇವೆ. ಅವುಗಳನ್ನೇ ಜ್ಞಾನ ಸೂಚನೆಗಳು ಎನ್ನುತ್ತೇವೆ. ಗಮ್ಯವನ್ನು ಸೇರಲು ದಾರಿಯಲ್ಲಿ ಎಷ್ಟೋ ಸೂಚನೆಗಳು ಇರುವಂತೆ ದೇವರನ್ನು ಸೇರಲು ದೇವಾಲಯಗಳಲ್ಲಿ ಎಷ್ಟೋ ಸೂಚನೆಗಳನ್ನು ಇರಿಸಿ ದೇವರು ಭಗವಂತನ ರೂಪದಲ್ಲಿ ಬಂದು ದೇವಾಲಯಗಳ ನಿರ್ಮಾಣ ಮಾಡಿದ್ದಾನೆಂದು ಹೇಳಬಹುದು. ಕೃತಯುಗದಲ್ಲಿ ದೇವರು ಯಾರ ಹೆಸರಿನಲ್ಲಿ ಬಂದಿರುವನೋ, ಯಾವ ಆಕಾರದಲ್ಲಿ ಬಂದಿರುವನೋ ನಮಗೆ ತಿಳಿದಿಲ್ಲ. ಆದ್ದರಿಂದ ಜ್ಞಾನ ತಿಳಿದಿರುವ ಹಿರಿಯರು ನಿರ್ಮಿಸಿದ ದೇವಾಲಯಗಳು ಎಂದಿದ್ದೇವೆ.

ದೇವಾಲಯಗಳು ದೇವರ ವಿಷಯವನ್ನು ತಿಳಿಸುವ ಸೂಚನ ಕೇಂದ್ರಗಳಾಗಿ, ಆಲಯದಲ್ಲಿನ ಪ್ರತಿ ಕಟ್ಟಡವು ಪ್ರತಿ ಕೆತ್ತನೆಯು ಪರಮಾತ್ಮ ಈ ವಿಧವಾಗಿದ್ದಾನೆಂದು ತಿಳಿಸುವ ವಿಧಾನವಾಗಿದೆ. ದೇವಾಲಯಗಳು ಮನುಷ್ಯನಿಗೆ ದೇವರ ವಿಷಯವನ್ನು ತಿಳಿಸುವಂತವುಗಳಾಗಿರುವಾಗ, ಅದರಲ್ಲಿನ ಆರಾಧನೆಗಳು

ಮನುಷ್ಯನು ತಾನು ದೇವರ ಬಗ್ಗೆ ಉಂಟಾದ ಉದ್ದೇಶವನ್ನು ತಿಳಿಸುವಂತ ಹವುಗಳಾಗಿವೆ. ಮಾನವನು ತನಗಿರುವ ವಿಶ್ವಾಸವನ್ನು, ತನಗಿರುವ ಉದ್ದೇಶವನ್ನು ಕಾರ್ಯರೂಪದಲ್ಲಿ ಹೊರಗೆ ತಿಳಿಸುವುದೇ ಆಲಯದಲ್ಲಿ ಆರಾಧನೆಗಳ ರೂಪದಲ್ಲಿ ಏರ್ಪಡಿಸಲ್ಪಟ್ಟಿವೆ. ಕಾಣಿಸದ ದೇವರ ವಿಷಯಗಳು ಕಾಣಿಸುವ ಗುರುತುಗಳಾಗಿ ಮತ್ತು ಮನುಷ್ಯನಿಗು ದೇವರಿಗು ಸಂದೇಶ ಸಾರುವಂತಹವುಗಳು ದೇವಾಲಯ ಗಳಾದಾಗ, ತನ್ನ ಭಾವನೆಯನ್ನು ವ್ಯಕ್ತಪಡಿಸುವ ಕಾರ್ಯಗಳಾಗಿ ಆರಾಧನೆ ಗಳಿರುವುದು ಕೃತಯುಗದಲ್ಲಿನ ಹಿರಿಯರು ಏರ್ಪಡಿಸಿ ಇಟ್ಟಿರುವ ವಿಧಾನ ಗಳಾಗಿವೆ. ದೈವವೇ ಮನುಷ್ಯನ ಆಕಾರದಲ್ಲಿ ಬಂದು ದೇವಾಲಯ ನಿರ್ಮಾ ಣಗಳು ಅದರಲ್ಲಿನ ಆರಾಧನೆಯ ವಿಧಾನಗಳು ಏರ್ಪಡಿಸಿದ್ದಾನೆಂದು ಹೇಳಬಹುದು.

ಅಂದಿನ ದಿನಗಳು ಯಾವ ಉದ್ದೇಶವನ್ನು ದೇವಾಲಯಗಳು ತಿಳಿಸುತ್ತಿವೆಯೋ, ಯಾವ ಉದ್ದೇಶಗಳು ಆಲಯಗಳಲ್ಲಿನ ಪೂಜಾ ವಿಧಾನಗಳನ್ನು ತಿಳಿಸುತ್ತಿವೆಯೋ ಅವು ಈದಿನ ಯಾರಿಗೂ ತಿಳಿಯದೇ ಹೋಗಿವೆ. ಕೃತಯುಗ ದಲ್ಲಿ ಪ್ರಾರಂಭವಾದ ವಿಧಾನಗಳು ರಹಸ್ಯಗಳಾಗಿರಲು, ಕೆಲವರು ತಮ್ಮ ತಮ್ಮ ಸ್ವಾರ್ಥಗಳಿಂದ ಪೂರ್ವದ ವಿಧಾನಗಳಿಗೆ ಯಾವ ರೀತಿಯಲ್ಲಿಯೂ ಸಂಬಂಧ ವಿಲ್ಲದ ನಿಯಮವನ್ನು ಬರೆದುಕೊಂಡು, ಹೇತುಬದ್ಧ ಇಲ್ಲದ ವಿಷಯಗಳನ್ನು, ಯಾವ ಶಾಸ್ತ್ರವಲ್ಲದ ವಿಷಯಗಳನ್ನು ಶಾಸ್ತ್ರವೆಂದು ಹೆಸರಿಟ್ಟು, ಇವುಗಳನ್ನು ಋಷಿಗಳು ಹೇಳಿದ್ದಾರೆಂದು ವೇದದಲ್ಲಿ ಇರುವ ವಿಷಯಗಳೆಂದು ಹೇಳುತ್ತಿದ್ದಾರೆ. ಈ ವಿಧವಾಗಿ ಕೆಲವರು ಮನುಷ್ಯರು ಸೃಷ್ಟಿಸಿದ ಶಾಸ್ತ್ರವಲ್ಲದ ಆಗಮ ಶಾಸ್ತ್ರವನ್ನು ಭಗವಂತನು ಕೃತಯುಗದಲ್ಲಿ ತಿಳಿಸಿದ ವಿಷಯಗಳಿಗೆ ವಿರುದ್ಧವಾಗಿ ಪರಮಾತ್ಮನ ವಿಷಯವನ್ನು ಸಂಕುಚಿತ ಮಾಡಿರುವ ಮಾಯಾ ಶಾಸ್ತ್ರವಾಗಿ ಉಳಿದಿದೆ.

ಈಗ ಯಾರು ಏನು ಹೇಳಿಕೊಂಡರೂ, ಮಾನವನು ತನ್ನ ಅಜ್ಞಾನವನ್ನು ದೇವಾಲಯಗಳಲ್ಲಿಯೂ ಸಹ ಹೇಳಿಸಿ ಶೈವ, ವೈಷ್ಣವವೆಂದು ಭೇದಗಳನ್ನು

ಕಲ್ಪಿಸಿದರೂ, ಪೂರ್ವದಲ್ಲಿ ಮೊದಲು ಭಗವತ್‌ಪ್ರೋಕ್ತವಾದ ವಿಷಯಗಳು ಈಗಲೂ ರಹಸ್ಯಗಳಾಗಿ ತಿಳಿಯದೇ ಹೋಗಿದ್ದರೂ ಪುನಃ ತನ್ನ ಧರ್ಮಗಳು ನೆಲೆಗೊಳಿಸಲ್ಪಡುತ್ತವೆಂದು ಭಗವಂತನು ಹೇಳಿದಂತೆ ಅವು ಬಯಲಿಗೆ ಬಾರದೇ ಇರುವುದಿಲ್ಲ. ಆ ರಹಸ್ಯಗಳೇ ಈಗ **"ದೇವಾಲಯ ರಹಸ್ಯಗಳು"** ಎಂಬ ಗ್ರಂಥ ರೂಪದಲ್ಲಿ ಹೊರಗೆ ಬಂದು ಆಗಮ ಶಾಸ್ತ್ರಗಳಿಗೆ ದೊಡ್ಡ ಸವಾಲಾಗಿ ನಿಲ್ಲುತ್ತಿವೆ. ಇದರಲ್ಲಿನ ಆಲಯಗಳ ವಿವರಗಳು ದೈವ ಜ್ಞಾನವನ್ನು ಬೋಧಿಸುತ್ತಾ, ಆರಾಧನೆಯ ವಿವರಗಳು ಮಾನವನ ವಿಶ್ವಾಸವನ್ನು ತಿಳಿಸುತ್ತಿವೆ. ದೈವಜ್ಞಾನವನ್ನು ಬೋಧಿಸದ ಆಲಯಗಳಾಗಲಿ, ಭಕ್ತಿಯನ್ನು ತಿಳಿಸದಂತಹ ಆರಾಧನೆಗಳಾಗಲೀ ವ್ಯರ್ಥವಾದವುಗಳೆಂದು, ಶಾಸ್ತ್ರಬದ್ಧವಲ್ಲವೆಂದು ತಿಳಿಸುವ ಜ್ಞಾನ ರೂಪವೇ **"ದೇವಾಲಯ ರಹಸ್ಯಗಳು"**.

ಇಂದಿನ ಮಾನವರು ಭಕ್ತಿಯೆಂಬ ಹೆಸರಿನಿಂದ ನಡೆದುಕೊಳ್ಳುವ ಅಜ್ಞಾನ ಮಾರ್ಗಕ್ಕೆ ಆತಂಕವಾಗಿ ನಿಲ್ಲುವುದೇ ಈ ಸಣ್ಣ ಗ್ರಂಥ ಒಂದರ ಭಾವನೆ. ದೇವಾಲಯಗಳಲ್ಲಿ ಕೋರಿಕೆಗಳನ್ನು ಕೋರುವುದೇ ನಮ್ಮ ವಿಜ್ಞಾನ ವಲ್ಲವೆಂದು ಪ್ರತಿಸ್ಪಂದಿಸುವುದೇ ಈ ಗ್ರಂಥದ ಒಂದು ಉದ್ದೇಶ. ಕೆಲವರು ತಪ್ಪಾಗಿ ಅರ್ಥೈಸಿಕೊಂಡು ಜ್ಞಾನ ಮಾರ್ಗವೆಂದುಕೊಳ್ಳುತ್ತಿರುವ ಅಜ್ಞಾನ ಮಾರ್ಗದಿಂದ ಮರಳಿಸಿ ಸ್ವಚ್ಛವಾದ ಜ್ಞಾನಮಾರ್ಗವನ್ನು ಹೇಳುವುದೇ ಈ ಗ್ರಂಥ ರಚನೆಯ ಒಂದು ಲಕ್ಷ್ಯವಾಗಿದೆ.

ಆದಿಯಲ್ಲಿ ಆತ್ಮಜ್ಞಾನವನ್ನು ತಿಳಿದವರು ಏನೂ ತಿಳಿಯದ ಮಾನವರಿಗೆ ಆತ್ಮ ವಿಷಯ ತಿಳಿಸಲು, ಅಜ್ಞಾನ ಅಂಧಕಾರದಲ್ಲಿರುವವರಿಗೆ ಪರಮಾತ್ಮನ ವಿಷಯ ತಿಳಿಸುವ ನಿಮಿತ್ತ ಯಾವ ರೂಪ ಇಲ್ಲದೇ ಯಾವ ಹೆಸರು ಇಲ್ಲದೇ ಇರುವವನನ್ನು ಕುರಿತು ತಿಳಿಸುವ ನಿಮಿತ್ತ, ಆತ್ಮಜ್ಞಾನವನ್ನು ಅಣುಅಣುವಿನಲ್ಲೂ ಅಳವಡಿಸಿ ನಿರ್ಮಿಸಿರುವಂತವುಗಳೇ ದೇವಾಲಯಗಳು. ದೇವಾಲಯಗಳು ಹೊರಗೆ ಹೇಗೆ ಕಾಣಿಸಿದರೂ ಅವುಗಳಲ್ಲಿ ಆತ್ಮ ಪ್ರಭೋದವೇ ಸೇರಿಕೊಂಡಿದೆ. ರೂಪವನ್ನು ತೋರಿಸಿ ರೂಪವಿಲ್ಲದವನನ್ನು ಅರ್ಥವಾಗುವಂತೆ ಮಾಡುವುದೇ

ದೇವಾಲಯ. ನಾಲ್ಕು ಗೋಡೆಗಳ ಮಧ್ಯೆ ಇರುವ ಪ್ರತಿಮೆಯನ್ನು ತೋರಿಸಿ ಎಲ್ಲೆಗಳಿಲ್ಲದ ಪರಮಾತ್ಮನ ವಿಷಯ ತಿಳಿಸುವುದು ದೇವಾಲಯ. ಎಷ್ಟೋ ಜ್ಞಾನವನ್ನು ಹೊಂದಿರುವ ಯೋಗಿಗಳು ಯೋಚಿಸಿ ಸ್ಥಿರ ಸ್ಥಾಯಿಯಾಗಿ ಪರಮಾರ್ಥದಿಂದ ಕೂಡಿ ಇರುವಂತೆ ನಿರ್ಮಿಸಿರುವ ನಿರ್ಮಾಣಗಳೇ ದೇವಾಲಯಗಳು.

ಪೂರ್ವಕಾಲದಲ್ಲಿ ಇದ್ದ ಮಾನವರೆಲ್ಲರಿಗೂ ಆತ್ಮಜ್ಞಾನವಿದ್ದಿತು. ಕಾಲಕ್ರಮೇಣ ಮಾನವರಲ್ಲಿ ಜ್ಞಾನ ನಶಿಸಿ ಅಜ್ಞಾನ ಬೆಳೆಯುತ್ತಾ ಬಂದಿತು. ಅಂತಹ ಸಮಯದಲ್ಲಿ ಜ್ಞಾನ ಶಕ್ತಿ ಇರುವ ಬ್ರಹ್ಮರ್ಷಿಗಳು ಯೋಚಿಸಿ ಸ್ವಲ್ಪ ಕಾಲಕ್ಕೆ ಆತ್ಮ ಜ್ಞಾನ ಅಂತ್ಯವಾಗಿ ಹೋಗುತ್ತದೆಂದು ತಿಳಿದು, ಅಂತಹ ಪರಿಸ್ಥಿತಿ ಬಾರದೇ ಇರಲು ಯಾವ ವಿಧಾನವಾದರೆ ಸರಿ ಹೋಗುತ್ತದೆಂದು ದೀರ್ಘವಾಗಿ ಆಲೋಚಿಸಿ ಕೊನೆಗೆ ದೇವಾಲಯಗಳನ್ನು ನಿರ್ಮಿಸಲು ಯೋಚಿಸಿದರು. ದೇವಾಲಯ ನಿರ್ಮಾಣದಲ್ಲಿ ಎಷ್ಟೋ ತಿಳುವಳಿಕೆ ಉಪಯೋಗಿಸಿ ಪ್ರತಿಯೊಂದು ಆತ್ಮಜ್ಞಾನ ಅರ್ಥದಿಂದಲೇ ಇರುವಂತೆ ನಿರ್ಮಾಣ ಮುಂದುವರೆಸಿದರು. ಈ ವಿಧವಾಗಿ ಮುಂದುವರಿಸಿದ ನಿರ್ಮಾಣದಲ್ಲಿ ಮೊಟ್ಟ ಮೊದಲನೆಯ ದೇವಾಲಯ ಲಿಂಗ ಪ್ರತಿಷ್ಠೆಯಿಂದ ಪ್ರಾರಂಭವಾಯಿತು.

## 2. ಲಿಂಗಪ್ರತಿಷ್ಠೆ

ಪ್ರಪಂಚವೇ ಇಲ್ಲದ ಸಮಯದಲ್ಲಿ ಇರುವುದು ಒಂದು ಪರಮಾತ್ಮನೇ, ಆ ಸ್ಥಿತಿಯಿಂದ ಸ್ವಲ್ಪ ಕಾಲಕ್ಕೆ ಪ್ರಪಂಚ ಉತ್ಪತ್ತಿಯಾಗಿದೆ. ಪ್ರಪಂಚ ಉತ್ಪತ್ತಿಗೆ ಒಂದೇ ಒಂದು ಶಕ್ತಿ ಕಾರಣವಾಗಿದೆ, ಅದೇ ಪರಮಾತ್ಮ. ಪರಮಾತ್ಮನಿಂದ ಉದ್ಭವಿಸಿರುವುದೇ ಪ್ರಪಂಚ. ಪ್ರಪಂಚವೆಂದರೆ! ಪ್ರ ಎಂದರೆ ಜನಿಸುವುದು, ಪಂಚ ಎಂದರೆ ಐದು. ಪ್ರಪಂಚವೆಂದರೆ ! ಹುಟ್ಟಿದ 1) ಆಕಾಶ, 2) ಗಾಳಿ, 3) ಅಗ್ನಿ, 4) ನೀರು, 5) ಭೂಮಿ ಎಂದು ಅರ್ಥ. ಈ ಐದು ಭಾಗಗಳನ್ನು

ಸೇರಿಸಿ ಪ್ರಕೃತಿ ಎಂದು ಹೇಳುವುದು ಸಹ ನಡೆದಿದೆ. ಪ್ರಕೃತಿ ಎಂದರೂ ಪ್ರಪಂಚವೆಂದರೂ ಒಂದೇ ಎಂದು ತಿಳಿಯಬೇಕು. ಪ್ರಕೃತಿ ಐದು ಭಾಗಗಳಿಂದ ಎಷ್ಟೋ ಜೀವರಾಶಿಗಳು ಉದ್ಭವಿಸಿವೆ. ಜೀವರಾಶಿಗಳು ಜೀವಿಸಿ ಮರಣಿಸುವುದಕ್ಕೆ ತಕ್ಕ ಯಂತ್ರಾಂಗವೆಲ್ಲವೂ ಪ್ರಕೃತಿಯಿಂದಲೇ ಏರ್ಪಡಿಸಲಾಗಿದೆ. ಪ್ರಕೃತಿ ಜನಿತವಾದುದೇ ಶರೀರ, ಪ್ರಕೃತಿ ಜನಿತವಾದವುಗಳೇ ಗುಣಗಳು. ಸಮಸ್ತ ಜೀವರಾಶಿಗಳ ಶರೀರಗಳು ಪ್ರಕೃತಿಯಲ್ಲಿಯೇ ಹುಟ್ಟಿ, ಪ್ರಕೃತಿಯಲ್ಲಿಯೇ ಬೆಳೆದು ಪ್ರಕೃತಿಯಲ್ಲಿಯೇ ಲಯವಾಗುತ್ತಿವೆ. ಮತ್ತೆ ಪ್ರಕೃತಿಯಿಂದಲೇ ಜನಿಸುತ್ತಿವೆ.

ಜೀವರಾಶಿಗಳನ್ನು ಹುಟ್ಟಿಸಲು ಪ್ರಕೃತಿಗೆ ಸ್ವಯಂಶಕ್ತಿ ಇದೆಯಾ? ಎಂದು ಯೋಚಿಸಿದಾಗ ಪಕೃತಿಗೆ ಆ ಶಕ್ತಿ ಇಲ್ಲವೆಂದು ತಿಳಿಯುತ್ತಿದೆ. ಪ್ರಕೃತಿಯಿಂದ ನಡೆಯುವ ಎಲ್ಲಾ ಕೆಲಸಗಳಿಗೂ ಒಂದು ಶಕ್ತಿ ಅಗತ್ಯವಿದೆ. ಅದೇ ಪರಮಾತ್ಮ ಶಕ್ತಿ. ಭಗವದ್ಗೀತೆ ರಾಜವಿದ್ಯ ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿ

**10ನೇ ಶ್ಲೋಕ.** ***ಮ ಯಾಧ್ಯಕ್ಷೇಣ ಪ್ರಕೃತಿಃ ಸ್ಸೂಯತೇ ಸ ಚರಾ ಚರಮ್***
***ಹೇತು ನಾ ನೇನ ಕೌಂತೇಯ । ಜಗ ದ್ವಿಪರಿವರ್ತತೇ ॥***

"ಪ್ರಕೃತಿ ನನ್ನ ಆಧಾರದಿಂದ ಜೀವರಾಶಿಗಳನ್ನು ಹುಟ್ಟುವಂತೆ. ಮರಣಿಸುವಂತೆ ಮಾಡುತ್ತಿದೆ" ಆದ್ದರಿಂದ ನಾನು ಮೂಲವಾಗಿದ್ದೇನೆ. ನನ್ನನ್ನು ಆಧಾರಮಾಡಿಕೊಂಡು ಪ್ರಪಂಚ ಚಕ್ರದಂತೆ ತಿರುಗುತ್ತಿದೆ ಎಂದು ಪರಮಾತ್ಮನೇ ಹೇಳಿದ್ದಾನೆ.

ಬ್ರಹ್ಮವಿದ್ಯೆ ಪ್ರಾರಂಭದಲ್ಲಿ ನಾವುಯಾರು? ನಾವು ಏತಕ್ಕಾಗಿ ಹುಟ್ಟಿದ್ದೇವೆ? ಹಾಗೆಯೇ ಮರಣವೆಂದರೇನು? ಹುಟ್ಟು ಸಾವುಗಳಿಗೆ ಕಾರಣ ಯಾರು? ಯಾವ ಶಕ್ತಿಯಿಂದ ಇದೆಲ್ಲವೂ ನಡೆಯುತ್ತಿದೆ ಎಂದು ತಿಳಿಯಬೇಕಾಗಿದೆ. ಹಾಗೆ ವಿವರಿಸಿಕೊಂಡಲ್ಲಿ ಪ್ರಕೃತಿಯಿಂದ ನಮ್ಮ ಶರೀರವು ತಯಾರಾಗುತ್ತಿದೆ ಎಂದು, ತಯಾರಾಗಿರುವ ಶರೀರದಲ್ಲಿ ಆತ್ಮ ಚೈತನ್ಯ ಸ್ವರೂಪವಾಗಿ ಚಲನೆಯನ್ನು ಕೊಡುತ್ತಿದೆಯೆಂದು, ಆದ್ದರಿಂದ ಶರೀರವನ್ನು ತಯಾರು ಮಾಡಿ ಒಂದು

ಆಕೃತಿಯನ್ನು ಕೊಡುವುದು ಪ್ರಕೃತಿಯೆಂದು ತಿಳಿಯುತ್ತಿದೆ. ಆದ್ದರಿಂದ ಅದನ್ನು ಸರ್ವ ಜೀವಿಗಳಿಗೂ ತಾಯಿಯಂತೆ ಹೇಳುತ್ತಿದ್ದೇವೆ. ಜಡವಾದ ಶರೀರಗಳಿಗೆ ಚಲಿಸುವ ಶಕ್ತಿ ಕೊಟ್ಟು ಕದಲಿಸುತ್ತ ಜೀವ ಸ್ವರೂಪವನ್ನು ಏರ್ಪಡಿಸುತ್ತಿದೆ ಪರಮಾತ್ಮ ಶಕ್ತಿ ಆದ್ದರಿಂದ ಪರಮಾತ್ಮನನ್ನು ಸರ್ವಜೀವಿಗಳಿಗೂ ತಂದೆಯಾಗಿದ್ದಾನೆಂದು ಹೇಳುತ್ತಿದ್ದೇವೆ. ಸರ್ವ ಪ್ರಪಂಚದಲ್ಲಿನ ಜೀವರಾಶಿಗಳಿಗೆ ತಾಯಿ ಪ್ರಕೃತಿ, ತಂದೆ ಪರಮಾತ್ಮನೆಂದು ಬ್ರಹ್ಮವಿದ್ಯೆಯಲ್ಲಿ ಪ್ರಧಾನ ಅಂಶವಾಗಿ ತಿಳಿಯಬೇಕು. ಮೂಲವಾದ ಪರಮಾತ್ಮ ಶಕ್ತಿಯಿಂದ ಹೊರ ಬಂದು ಪ್ರಕೃತಿ ಆಧಾರದಿಂದ ಶರೀರಗಳನ್ನು ಧರಿಸಿ ಹುಟ್ಟಿ ಸಾಯುತ್ತಿದ್ದೇವೆಂಬ ವಿಷಯ ಪ್ರಪ್ರಥಮವಾಗಿ ಎಲ್ಲರಿಗೂ ತಿಳಿಯಬೇಕಾಗಿರುವ ಜ್ಞಾನವಾಗಿದೆ.

ಈ ವಿಷಯ ತಿಳಿಸುವ ಉದ್ದೇಶ ತಾಯಿತಂದೆಯರ ಮೇಲೆ ದಯೆ ಇಲ್ಲದ ಪುತ್ರನು ಹುಟ್ಟಿದರೇನು ಸತ್ತರೇನು ಹುತ್ತದಲ್ಲಿನ ಗೆದ್ದಲು ಹುಟ್ಟಿದರೇನು? ಸತ್ತರೇನು? ಎಂಬುದಾಗಿ ವೇಮನ ಯೋಗಿ ಹೇಳಿದ್ದಾನೆ. ಅಂದರೆ ಪರಮಾತ್ಮ ಪ್ರಕೃತಿಯನ್ನು ಕುರಿತು ತಿಳಿಯದವನು ಹುಟ್ಟಿದರೂ ಹುಟ್ಟದವನೊಂದಿಗೆ ಸಮಾನ. ಯಾರಿಗೂ ತಿಳಿಯದೇ ಹುತ್ತದಲ್ಲಿನ ಗೆದ್ದಲು ಹುಟ್ಟಿ ಸಾಯುವಂತೆ ಮಾನವ ಜನ್ಮವೂ ಸಹ ವ್ಯರ್ಥವೆಂದು ಆತನ ಭಾವನೆ. ಆದ್ದರಿಂದ ಪ್ರತಿ ಜೀವಿಯೂ ನಿಜವಾದ ತಾಯಿತಂದೆಯರು ಯಾರೆಂದು ತಿಳಿದುಕೊಳ್ಳಬೇಕು. ಸರ್ವ ಜೀವಿಗಳಿಗೂ ನಿಜವಾದ ತಂದೆ–ತಾಯಿಯರನ್ನು ತಿಳಿಸುತ್ತಾ ಭಗವದ್ಗೀತೆಯ ಗುಣತ್ರಯ ವಿಭಾಗ ಯೋಗವೆಂಬ ಅಧ್ಯಾಯದಲ್ಲಿ.

**ಶ್ಲೋಕ 3. ಮಮ ಯೋನಿ ರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್**
**ಸಂಭವಃ ಸರ್ವಭೂತಾನಾಮ್ ತತೋ ಭವತಿ ಭಾರತಾ ॥**

**ಶ್ಲೋಕ 4. ಸರ್ವಯೋನಿಷು ಕೌಂತೇಯ । ಮೂರ್ತಯಃ ಸಂಭವಂತಿ ಯಾಃ**
**ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜ ಪ್ರದಃ ಪಿತಾ.**

**ಭಾವಾರ್ಥ:–** "ಪ್ರಕೃತಿಯೆಲ್ಲವೂ ನನಗೆ ಸ್ತ್ರೀಯಾಗಿ ಇದೆ. ಅದಕ್ಕೆ ನಾನು

ಬೀಜದಾತನಾಗಿ ಇದ್ದೇನೆ. ಆದ್ದರಿಂದ ಸಮಸ್ತ ಜೀವರಾಶಿಗಳು ನಮಗೆ ಹುಟ್ಟುತ್ತಿವೆ. ಯಾವ ಗರ್ಭದಿಂದ ಯಾವ ಆಕಾರದಿಂದ ಹುಟ್ಟುವ ಜೀವರಾಶಿಯಾದರೂ ಅಂದರೆ ಸಮಸ್ತ ಜೀವರಾಶಿಗಳಿಗೂ ಮಾತೆ ಮೂಲಪ್ರಕೃತಿಯಾಗಿದೆ, ಬೀಜದಾತನಾದ ನಾನು ತಂದೆ ಎಂದು ತಿಳಿಯಬೇಕು". ಪೂರ್ವಕಾಲದಲ್ಲಿ ಶಾಸ್ತ್ರವಚನ ಪ್ರಕಾರ ತಾಯಿ ತಂದೆಯಾದ ಪ್ರಕೃತಿ ಪರಮಾತ್ಮರನ್ನು ತಿಳಿದವರು ಈ ವಿಷಯ ಮಾಸಿ ಹೋಗದಂತೆ ಎಲ್ಲರೂ ಗ್ರಹಿಸುವಂತೆ ಮಾಡಿರುವ ವಿಧಾನವೇ ಲಿಂಗಪ್ರತಿಷ್ಠೆ. ಪರಮಾತ್ಮನಿಗೆ ಆಕಾರವಿಲ್ಲ. ಆದ್ದರಿಂದ ಮೂಗು, ಮುಖವಿಲ್ಲದ ಒಂದು ಕಲ್ಲನ್ನು ಇಟ್ಟು, ಅದನ್ನು ದೇವರೆಂದು ಕರೆಯುವುದು ಮೊದಲು ನಡೆದಿದೆ. ಪರಮಾತ್ಮನು ಪುರುಷನೆನ್ನುವಹಾಗೆ ಪುರುಷಾಂಗಕಾರವಾದ ಲಿಂಗವನ್ನು ಪ್ರತಿಷ್ಠೆ ಮಾಡಿದ್ದಾರೆ. ಪ್ರಕೃತಿಯನ್ನು ಸ್ತ್ರೀಯಾಗಿ ಗುರುತಿಸುವಂತೆ ಸ್ತ್ರೀಯೋನಿ ಆಕಾರವಾಗಿ ಪಾಣಿಮಟ್ಟವನ್ನು ಕೆತ್ತಿ ಇಟ್ಟಿದ್ದಾರೆ. **ಸ್ತ್ರೀಯ ಅಂಗಾಕಾರವಾದ ಪಾಣಿಮಟ್ಟದಲ್ಲಿ ಪುರುಷಾಂಗಕಾರವಾದ ಲಿಂಗವನ್ನು ಪ್ರತಿಷ್ಠೆ ಮಾಡಿ ಪ್ರಕೃತಿ ಪುರುಷರು ಸೇರಿ ಇದ್ದಾರೆಂಬ ಅರ್ಥ ಬರುವಂತೆ ಮಾಡಿದ್ದಾರೆ. ಪಾಣಿಮಟ್ಟದ ಮಧ್ಯದಲ್ಲಿ ಲಿಂಗವನ್ನಿರಿಸುವುದು ಪ್ರಕೃತಿಗೆ ಪರಮಾತ್ಮನು ಆಧಾರವಾಗಿದೆ ಎಂದು ತಿಳಿಯುತ್ತಿದೆ. ಪಾಣಿಮಟ್ಟದ ಮೇಲೆ ಲಿಂಗ ಇರಿಸುವುದರಿಂದ ಪ್ರಕೃತಿಯನ್ನು ಅಧಿಷ್ಠಿಸಿ ಪ್ರಮಾತ್ಮನಿದ್ದಾನೆಂಬ ಭಾವನೆಯೂ ಸಹ ತಿಳಿಯುತ್ತಿದೆ. ಲಿಂಗವು ಸ್ವಲ್ಪ ಪಾಣಿಮಟ್ಟದೊಳಗೆ, ಸ್ವಲ್ಪ ಪಾಣಿಮಟ್ಟದ ಹೊರಗೆ ಕಾಣಿಸುವುದು ಪರಮಾತ್ಮ ಪ್ರಕೃತಿಯೊಳಗೆ ಪ್ರಕೃತಿ ಹೊರಗೆ ಇದ್ದಾನೆಂಬ ವಿಷಯ ತಿಳಿದು ಬರುತ್ತಿದೆ.** ಈ ವಿಧವಾಗಿ ಹಿರಿಯರು ಅರ್ಥ ಬರುವಂತೆ ಇಟ್ಟಿರುವುದು ಶೃಂಗಾರಕ್ಕಾಗಿ ಅಲ್ಲ. ಪ್ರಕೃತಿ ಪುರುಷರ ರಹಸ್ಯವಿದು ಎಂದು ತಿಳಿಸುವ ನಿಮಿತ್ತವೇ ಹೊರತು ಬೇರೆಯಲ್ಲ.

ಪ್ರಕೃತಿ ಪುರುಷರು ಸೇರುವುದೇ ಜಗತ್ತಿಗೆ ಮೂಲಕಾರಣವೆಂದು ತಿಳಿಸುವ ಸಲುವಾಗಿಯೇ ಇದರಲ್ಲಿನ ಭಾವನೆ ಹೊರತು ಬೇರೆಯಲ್ಲ. ಸಮಸ್ತ ಜೀವರಾಶಿಗಳಿಗೂ ಮಾತೆ ಪ್ರಕೃತಿ, ತಂದೆ ಪರಮಾತ್ಮನೆಂದು ತಿಳಿಸುವ ಸಲುವಾಗಿಯೇ ಈ ಲಿಂಗ ಪ್ರತಿಷ್ಠೆ ನಡೆದಿದೆ. ಸಮಸ್ತ ಜೀವರಾಶಿಗಳು ಪರಮಾತ್ಮನ

ಚೈತನ್ಯದಿಂದ ಪ್ರಕೃತಿಯಿಂದ ಒಂದು ಆಕಾರದಿಂದ ಹುಟ್ಟುತ್ತಿವೆಯೆಂದು ತಿಳಿದುಕೊಳ್ಳುವಂತೆ ಲಿಂಗದ ಮೇಲೆ ಒಂದು ಪಾತ್ರೆಯನ್ನಿರಿಸಿ ಅದರಲ್ಲಿ ನೀರು ಸುರಿದು ಒಂದೊಂದು ಹನಿ ಲಿಂಗದ ಮೇಲೆ ಬೀಳುವಂತೆ ಮಾಡಿದ್ದಾರೆ. ಲಿಂಗದ ಮೇಲೆ ಬಿದ್ದ ನೀರಿನ ಒಂದು ಬಿಂದು ಲಿಂಗದಿಂದ ಜಾರಿ ಪ್ರಕೃತಿಯಾಗಿ ಹೋಲಿಸಿರುವ ಪಾಣಿಮಟ್ಟ ಸೇರಿ ಅಲ್ಲಿಂದ ಒಂದು ಮಾರ್ಗದ ಮುಖಾಂತರ ಹೊರಬೀಳುತ್ತಿದೆ. ಈ ವಿಧವಾಗಿ ಪ್ರತಿ ನೀರಿನ ಬಿಂದುವು ಜಾರಿ ಹೋಗುತ್ತಿದೆ. ಪ್ರತಿ ಜೀವರಾಶಿಯು ಪ್ರಕೃತಿ ಪುರುಷರಿಂದಲೇ ಜನ್ಮಿಸುತ್ತಿದೆ ಎನ್ನುವುದಕ್ಕೆ ಆಧಾರವಾಗಿ ಲಿಂಗಪ್ರತಿಷ್ಠೆಯ ಮೇಲೆ ಧಾರಾಪಾತ್ರೆಯನ್ನು ಇಟ್ಟಿದ್ದಾರೆ. ನೀರಿನ ಬಿಂದುಗಳನ್ನು ಜೀವಿಗಳಾಗಿ ಹೋಲಿಸಿ ಪರಮಾತ್ಮ ಪ್ರಕೃತಿಯಿಂದಲೇ ಉದ್ಭವಿಸುತ್ತಿವೆಯೆಂದು ನೀರಿನ ಬಿಂದುವನ್ನು ಲಿಂಗದಿಂದ ಜಾರಿ ಪಾಣಿಮಟ್ಟ ದಿಂದ ಹೊರಗೆ ಹೋಗುವಂತೆ ಮಾಡಿದ್ದಾರೆ. ಕೆಳಗಿನ ನೀರನ್ನೇ ಅಂದರೆ ಕೆರೆಯಿಂದಾಗಲಿ, ಕೊಳದಿಂದಾಗಲಿ, ಬಾವಿಯಿಂದಾಗಲಿ ತಂದು ಧಾರಾ ಪಾತ್ರೆಯಲ್ಲಿ ಸುರಿದು ಇರಿಸುತ್ತ ಎಲ್ಲಾ ವೇಳೆಗಳಲ್ಲೂ ಎಡೆಬಿಡದೆ ಲಿಂಗದ ಮೇಲೆ ನೀರಿನ ಬಿಂದುಗಳು ಬೀಳುವಂತೆ ಮಾಡುವುದರಿಂದ ಎಡ ಬಿಡದೆ ಅಂದರೆ ಬಿಡುವಿಲ್ಲದೆ ಜೀವಿಗಳು ಸಾಯುತ್ತ ಹುಟ್ಟುತ್ತಿವೆ ಎಂದು ತಿಳಿಯುತ್ತಿದೆ. ಲಿಂಗದಿಂದ ನೀರು ಪಾಣಿಮಟ್ಟದ ಮೇಲಿಂದ ಹೋಗುವುದೇ ಸೃಷ್ಟಿಯ ಅಂತರಾರ್ಥವಾಗಿ ಹಿರಿಯರು ನಿರ್ಮಿಸಿದ್ದಾರೆ.

ಈಗ ಹೇಳುವ ಮುಖ್ಯಾಂಶವಿದು, ಸರ್ವಜೀವರಾಶಿಗಳ ಅಂತ ರಾರ್ಥವು ಇದರಲ್ಲಿ ಅಡಗಿದೆ. ಪರಮಾತ್ಮನ ಸ್ವರೂಪವು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟು ಪ್ರಕೃತಿ ಎಲ್ಲಾ ಕಡೆಗೂ ವ್ಯಾಪಿಸಿಕೊಂಡಿದೆ. ಹಾಗೆ ವ್ಯಾಪಿಸಿಕೊಂಡ ವಿಧಾನವು ಈ ವಿಧವಾಗಿ ಇದೆಯೆಂದು ತೋರಿಸುವುದೇ ಇದರಲ್ಲಿನ ಸಾರಾಂಶ. ಪರಮಾತ್ಮನು ಪ್ರಕೃತಿಗಿಂತಲೂ ಅತೀತನಾಗಿದ್ದು ಮೂವರು ಪುರುಷರಾಗಿ ವ್ಯಾಪಿಸಿದ್ದಾನೆಂಬುವುದಕ್ಕೆ ಅರ್ಥವಾಗಿ ಈಶ್ವರ ಲಿಂಗದ ಮೇಲೆ ವಿಭೂತಿ ರೇಖೆಗಳು ಮೂರಾಗಿ ತೋರಿಸುವುದು ನಡೆದಿದೆ. ಭಗವದ್ಗೀತೆಯಲ್ಲಿ

ಪುರುಷೋತ್ತಮ ಪ್ರಾಪ್ತಿಯೋಗ ಎಂಬ ಅಧ್ಯಾಯದಲ್ಲಿ ಹೇಳಿರುವ ಕ್ಷರ ಅಕ್ಷರ ಪುರುಷೋತ್ತಮರನ್ನು ಮೂವರು ಪುರುಷರಾಗಿ ಒಬ್ಬ ಪುರುಷನೇ ವಿಭಜಿಸಲ್ಪಟ್ಟಿದ್ದಾನೆಂದು ಅರ್ಥ ಬರುವಂತೆ ಲಿಂಗದ ಮೇಲೆ ಮೂರು ಬಿಳಿಯ ರೇಖೆಗಳನ್ನು ತೋರಿಸುವುದು ನಡೆದಿದೆ. ಅದರಲ್ಲಿ ಕೆಳಗಿರುವ ರೇಖೆ ಜೀವಾತ್ಮನೆಂದು, ಮಧ್ಯದಲ್ಲಿರುವ ರೇಖೆ ಸರ್ವ ಜೀವಿಗಳಲ್ಲಿಯೂ ಬೆರೆತು ಇರುವ ಆತ್ಮನೆಂದು, ಮತ್ತು ಮೇಲೆ ಇರುವ ರೇಖೆ ಪರಮಾತ್ಮನೆಂದು ಅರ್ಥ ಬರುವಂತೆ ತೋರಿಸಿದ್ದಾರೆ. ಲಿಂಗದ ಮೇಲೆ ಮೂರು ರೇಖೆಗಳು ಇರುವುದೇ ಅಲ್ಲದೆ ಮಧ್ಯದಲ್ಲಿರುವ ರೇಖೆಗೆ ಮಾತ್ರ ಚಂದನದಿಂದಾಗಲಿ, ಕುಂಕುಮದಿಂದಾಗಲಿ ಬೊಟ್ಟು ಇಡುವುದರಿಂದ ಅದಕ್ಕೆ ಪ್ರತ್ಯೇಕತೆ ಏರ್ಪಟ್ಟಿದೆ. ಹಾಗೆ ಗುರುತಿಸುವುದಕ್ಕೆ ಕಾರಣವೇನೆಂದರೆ !

ಒಂದೊಂದು ಶರೀರದಲ್ಲಿ ಒಂದೊಂದಾಗಿ ಬೇರೆ ಬೇರೆಯಾಗಿ ಇವೆ. "ಜೀವಾತ್ಮರು". ಎಲ್ಲಾ ಶರೀರಗಳಲ್ಲಿಯೂ ಒಂದೇ ಅಂಶವಾಗಿದ್ದೂ ಒಂದೊಂದು ಶರೀರದಲ್ಲಿ ಬಿಡಿಬಿಡಿಯಾಗಿರುವುದು "ಆತ್ಮ". ಶರೀರಗಳಲ್ಲಿಯೂ ಹೊರಗೆ ಎಲ್ಲಾ ಕಡೆಯಲ್ಲಿಯೂ ಒಂದಾಗಿ ವ್ಯಾಪಿಸಿಕೊಂಡಿದೆ "ಪರಮಾತ್ಮ". ಜೀವಾತ್ಮ ಆತ್ಮಗಳು ಸಜೀವವಾದ ಶರೀರದಲ್ಲಿ ಮಾತ್ರವೇ ಇರುತ್ತದೆ. ಪರಮಾತ್ಮ ಸಜೀವ, ನಿರ್ಜೀವ ಶರೀರಗಳಲ್ಲಿಯೂ ಸಹ ಇರುತ್ತದೆ. ಜೀವಾತ್ಮನಿರುವ ಸ್ಥಳದಲ್ಲಿಯೇ ಆತ್ಮವೂ ಸಹ ಇರುತ್ತದೆ. ಆದ್ದರಿಂದ ಕೂಟಸ್ಥನೆಂಬ ಹೆಸರು ಸಹ ಆತ್ಮನಿಗೆ ಇದೆ ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ

**16 ನೇ ಶ್ಲೋಕ : ದ್ವಾ ವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋ ಕ್ಷರ ಉಚ್ಯತೇ**

"ಲೋಕದಲ್ಲಿ ಇಬ್ಬರು ಪುರುಷರಿದ್ದಾರೆ. ಅವರೇ ಕ್ಷರಾಕ್ಷರರು. ಕ್ಷರನು ಸರ್ವ ಜೀವ ಶರೀರಗಳಲ್ಲಿಯೂ ಇದ್ದಾನೆ. ಅಕ್ಷರನು ಕ್ಷರನು ಎಲ್ಲಿರುವನೋ ಅಲ್ಲಿ ಅವನೊಂದಿಗೆ ಕೂಡಿಕೊಂಡಿದ್ದಾನೆ".

ಈ ಇಬ್ಬರು ಪುರುಷರಿಗಿಂತಲೂ ಬೇರೆಯಾಗಿ ಉತ್ತಮವಾದುದು ಒಂದಿದೆ ಎಂದು 17ನೇ ಶ್ಲೋಕದಲ್ಲಿ ತಿಳಿಸಿದ್ದಾರೆ, ಅದನ್ನೇ ಪರಮಾತ್ಮನೆಂದು ಹೇಳುವುದು ಸಹ ನಡೆಯುತ್ತಿದೆ. ಆತ್ಮಕ್ಕಿಂತಲೂ ಪರವಾಗಿ (ಬೇರೆಯಾಗಿ) ಇದೆ. ಆದ್ದರಿಂದ ಮೂರನೆಯದನ್ನು ಪರಮಾತ್ಮನೆನ್ನುವುದರಲ್ಲಿ ಅರ್ಥವಿದೆ. ಈ ವಿಧವಾಗಿರುವ ಮೂವರು ಪುರುಷರನ್ನು ಕುರಿತು ತಿಳಿಸುವುದೇ ಲಿಂಗದ ಮೇಲಿನ ಮೂರು ರೇಖೆಗಳ ಗುರುತು. ಜೀವಾತ್ಮ ಪರಮಾತ್ಮನನ್ನು ಸೇರಿದಾಗ ಜನ್ಮಗಳು ಇಲ್ಲದೇ ಹೋಗಿ ಜೀವಭಾವನೆ ನಶಿಸಿ ದೈವ ಭಾವನೆ ಏರ್ಪಡುತ್ತದೆ. ಅಂದರೆ ಜೀವಾತ್ಮನು ಅಣುಅಣುವಿನಲ್ಲೂ ವ್ಯಾಪಿಸಿರುವ ಪರಮಾತ್ಮನಲ್ಲಿ ಸೇರಿ ತಾನು ಸಹ ಶೂನ್ಯನಾಗಿ ಹೋಗುತ್ತಾನೆ. ಆ ವಿಧವಾಗಿ ಜೀವಾತ್ಮ ಪರಮಾತ್ಮನನ್ನು ಸೇರಬೇಕೆಂದರೆ ಎರಡನೆಯದಾದ ಆತ್ಮನನ್ನು ತಿಳಿದುಕೊಳ್ಳಲೇ ಬೇಕಾಗಿದೆ. ಆತ್ಮನನ್ನು ತಿಳಿದುಕೊಂಡು ಆತ್ಮ ಜ್ಞಾನಶಕ್ತಿಯಿಂದ ಜನ್ಮಗಳಿಗೆ ಕಾರಣವಾದ ಕರ್ಮಗಳೆಲ್ಲವನ್ನು ನಿರ್ಮೂಲನೆ ಮಾಡಿಕೊಂಡ ನಂತರವೇ ಜೀವಾತ್ಮ ಪರಮಾತ್ಮನನ್ನು ಸೇರಬಲ್ಲನು. ಜೀವಾತ್ಮ ಶರೀರದಿಂದ ಇರುವಾಗ ಆತ್ಮನನ್ನು ತಿಳಿದುಕೊಂಡರೂ, ಶರೀರವನ್ನು ಬಿಟ್ಟ ನಂತರ ಪರಮಾತ್ಮನನ್ನು ಸಂದರ್ಶಿಸಬಲ್ಲನು. ಆದ್ದರಿಂದ ಶರೀರದಿಂದ ಯಾರೂ ಸಹ ಪರಮಾತ್ಮನನ್ನು ತಿಳಿಯಲಾರರು. ಪರಮಾತ್ಮನು ಶರೀರವಿಲ್ಲದವರಿಗೇ ತಿಳಿಯುವವನು. ಯಾವ ಜೀವಿಯೇ ಆಗಲಿ ಜೀವನದಲ್ಲಿ ಆತ್ಮನನ್ನೇ ಅರಿತುಕೊಂಡು ಧ್ಯಾನಿಸಬೇಕು. ಪರಮಾತ್ಮನನ್ನು ಧ್ಯಾನಿಸಲಾರನು, ಪೂಜಿಸಲಾರನು. ಆದ್ದರಿಂದ ಲಿಂಗದ ಮೇಲೆ ಮೂರು ರೇಖೆಗಳಾಗಿ ಗುರುತಿಸಿರುವವುಗಳಲ್ಲಿ ಮಧ್ಯದಲ್ಲಿರುವ ರೇಖೆಗೆ ಚಂದನ, ಕುಂಕುಮದ ಗುರುತುಗಳನ್ನು ಕೊಟ್ಟಿದ್ದಾರೆ.

ಆತ್ಮಗಳು ಸ್ವಚ್ಛವಾದವುಗಳೆಂದು ಗುರುತಿಸುವುದಕ್ಕೆ ಸ್ವಚ್ಛವಾದ ಬಿಳಿಬಣ್ಣದಲ್ಲಿ ರೇಖೆಗಳನ್ನು ಗುರುತಿಸಿದ್ದಾರೆ. ಮುಖ್ಯವಾಗಿ ಪಾಣಿಮಟ್ಟವನ್ನು ಬಿಟ್ಟು ಲಿಂಗವನ್ನೇ ಪೂಜಿಸುತ್ತೇವೆ. ಆದ್ದರಿಂದ ಪ್ರಕೃತಿಗಿಂತ ಪುರುಷನೇ ಮುಖ್ಯವೆಂದು ತಿಳಿದು ಬರುತ್ತಿದೆ. ಮೇಲೆ ಹೇಳಲಾದ ಮೂರು ರೇಖೆಗಳನ್ನು

ಕುರಿತು ಬಹಳ ಜನರಿಗೆ ಬೇರೆ ಅಭಿಪ್ರಾಯವಿದೆ. ವಿಮರ್ಶೆಗೆ ನಿಲ್ಲದ ಕಟ್ಟುಕಥೆಗಳು ಜ್ಞಾನವಲ್ಲ. ವಿಮರ್ಶೆಗೆ ನಿಲ್ಲುವ ವಿಷಯಗಳೇ ನಿಜವಾದ ಜ್ಞಾನವೆಂದು ತಿಳಿಯಬೇಕು.



ಲಿಂಗ ಪ್ರತಿಷ್ಠೆ

ಧನೇಷಣ, ಧಾರೇಷಣ, ಪುತ್ರೇಷಣ ಎಂಬ ಈಷಣತ್ರಯಗಳಾಗಿ ಅಭಿವರ್ಣಿಸಿ ಲಿಂಗದ ಮೇಲೆ ಮೂರು ರೇಖೆಗಳನ್ನು ಹೇಳುತ್ತಿದ್ದಾರೆ. ಇದು ಅಸತ್ಯವೆಂದು ಬಹಳಜನರಿಗೆ ತಿಳಿದಿಲ್ಲ. ಸತ್ಯಾಸತ್ಯಗಳು ವಿಮರ್ಶೆಗಳಿಂದಲೇ ತಿಳಿಯುತ್ತವೆ. ಆದ್ದರಿಂದ ಈಗ ವಿಮರ್ಶೆ ಮಾಡದೇ ತಪ್ಪುವುದಿಲ್ಲ. ಜೀವಿಗಿರುವ ಗುಣಗಳಲ್ಲಿ 1. ಕಾಮ (ಆಸೆ) 2. ಕ್ರೋಧ, 3. ಲೋಭ, 4. ಮೋಹ, 5. ಮದ, 6. ಮಾತ್ಸರ್ಯವೆನ್ನುವವುಗಳು ಮುಖ್ಯವಾದವುಗಳು. ಅವುಗಳಲ್ಲಿ ಮೊದಲನೆಯದು ಆಸೆ (ಕಾಮ) ಆಸೆಗಳೆಂದರೆ ಎಷ್ಟೋ ವಿಧಗಳಲ್ಲಿವೆ. ತಿಂಡಿಯ ಮೇಲೆ ಆಸೆ, ಬಟ್ಟೆಗಳ ಮೇಲೆ ಆಸೆ, ಭೂಮಿಯ ಮೇಲೆ ಆಸೆ, ಹೀಗೆ ಎಷ್ಟೋ ವಿಧಗಳಿರಬಹುದು. ಹಣದ ಮೇಲೆ ಆಸೆ, ಹೆಂಡತಿಯ ಮೇಲೆ ಆಸೆ, ಪುತ್ರರ ಮೇಲಿನ ಆಸೆಯನ್ನು ಶಂಕರನು ಸುಟ್ಟು ಬೂದಿ ಮಾಡಿ ಆ ಬೂದಿಯನ್ನು ತನ್ನ ಹಣೆಯ ಮೇಲೆ ತಿದ್ದಿಕೊಂಡಿದ್ದಾನೆಂದು, ಆ ಮೂರು ಆಸೆಗಳನ್ನು ಜಯಿಸಿದ್ದೇನೆಂಬ ಸಂಕೇತವಾಗಿ ಅವುಗಳನ್ನು ಹಣೆಯ ಮೇಲೆ ಧರಿಸಿ ತೋರಿಸಿ, ನೀವೂ ಈ ವಿಧವಾಗಿ ಆಸೆಗಳನ್ನು ಜಯಿಸಿರೆಂದು ಆತನು ವಿಭೂತಿ ರೇಖೆಗಳನ್ನು ಧರಿಸಿದ್ದಾನೆಂದು ಬಹಳಜನ ಹೇಳುತ್ತಿದ್ದಾರೆ. ಹಾಗಾದಲ್ಲಿ ಶಂಕರನಿಗೆ ಧನ, ಹೆಂಡತಿ ಪುತ್ರರ ಮೇಲೆ ಆಸೆ ಮಾತ್ರವೇ ಇಲ್ಲವೆಂದು ಉಳಿದ ಆಸೆಗಳೆಲ್ಲ ಇವೆಯೆಂದು ತಿಳಿಯುತ್ತಿದೆ. ಜ್ಞಾನ ಮಾರ್ಗದಲ್ಲಿ ಆಸೆಗಳೆಲ್ಲವನ್ನು ಜಯಿಸಿರೆನ್ನುವುದು ಸಮಂಜಸ. ಆದರೆ ಮೂರು ಆಸೆಗಳನ್ನು ಮಾತ್ರವೇ ಜಯಿಸಿರೆಂದು ಹೇಳುವುದು ಏನು ಸಮಂಜಸ? ಶಂಕರನಿಗೆ ಧನದ ಮೇಲೆ ಆಸೆ ಇಲ್ಲ ಆದರೆ ಭೂಮಿ ಬಂಗಾರದ ಮೇಲೆ ಆಸೆ ಇರಬಹುದು. ಹಾಗೆಯೇ ಉಳಿದ ಆಸೆಗಳೆಲ್ಲವೂ ಇರಬಹುದು. ಅಂತಹದರಲ್ಲಿ ಆತನು ಕಾಮದಹನನು ಹೇಗಾಗಬಲ್ಲನು? ಈ ಪ್ರಶ್ನೆಗಳಿಗೆ ಸರಿಯಾದ ಸಮಾಧಾನವಿಲ್ಲ. ಆದ್ದರಿಂದ ಧನೇಷಣ, ಧಾರೇಷಣ, ಪುತ್ರೇಷಣ ಎಂಬ ಈಷಣತ್ರಯ ಭಾವನೆ ವಿಭೂತಿ ರೇಖೆಗಳಿಗೆ ಸರಿಹೋಗುವುದಿಲ್ಲ. ಅಸಲಿಗೆ, ಲಿಂಗಕ್ಕೂ, ಶಂಕರನಿಗೂ ಯಾವ ವಿಧದಲ್ಲಿಯೂ ಸಂಬಂಧವಿಲ್ಲ, ಹೇಗೆಂದರೆ!

ಪೂರ್ವದಲ್ಲಿ ಪರಮಾತ್ಮನನ್ನು ತಿಳಿಸುವ ಉದ್ದೇಶದಿಂದ ಲಿಂಗ ಪ್ರತಿಷ್ಠೆ ಮಾಡಿದರೆ ಈ ದಿನ ಅದನ್ನು ವಕ್ರೀಕರಿಸಿಕೊಂಡು ಲಿಂಗವನ್ನು ಶಂಕರನನ್ನಾಗಿ ಹೋಲಿಸುವುದು ನಡೆಯುತ್ತಿದೆ. ಈಶ್ವರನಿಗೂ ಶಂಕನಿಗೂ ಎಷ್ಟೋ ಭೇಧವಿದ್ದರೂ ಸಹ ಈ ಕಾಲದಲ್ಲಿ ಈಶ್ವರನೇ ಶಂಕರನಾಗಿದ್ದಾನೆ, ಶಂಕರನೇ ಈಶ್ವರನಾಗಿದ್ದಾನೆ. ಕೋಟೀಶ್ವರನೆಂದರೆ ಕೋಟಿಗೆ ಅಧಿಪತಿ. ಲಕ್ಷಾಧೀಶ್ವರನೆಂದರೆ ಲಕ್ಷಕ್ಕೆ ಅಧಿಪತಿ. ಹಾಗೆಯೇ ಭೋಗೇಶ್ವರನೆಂದರೆ ಭೋಗಕ್ಕೆ ಅಧಿಪತಿ. ಯೋಗೀಶ್ವರನೆಂದರೆ ಯೋಗಕ್ಕೆ ಅಧಿಪತಿ ಎಂದು ಅರ್ಥವಾಗುತ್ತದೆ. ಈಶ್ವರ ಎಂಬ ಪದಕ್ಕೆ ಅಧಿಪತಿ ಎಂದು ವಿಷದವಾಗಿ ತಿಳಿಯುತ್ತಿದೆ. ಪ್ರಪಂಚಕ್ಕೇ ಅಧಿಪತಿಯಾಗಿರುವ ಪರಮಾತ್ಮನೊಬ್ಬನನ್ನೇ ಈಶ್ವರನೆಂದು ಬ್ರಹ್ಮವಿದ್ಯೆಯಲ್ಲಿ ಹೇಳುತ್ತಿರುವುದು ನಡೆಯುತ್ತಿದೆ. ಪ್ರಕೃತಿಗೇ ಅಧಿಪತಿಯಾದ ಪರಮಾತ್ಮ ಭಾವನೆಯಿಂದ ಲಿಂಗವನ್ನಿರಿಸಿದರೆ ಅದನ್ನು ಕೊರಳಲ್ಲಿ ಹಾವು ಧರಿಸಿದ ಶಂಕರನನ್ನಾಗಿ ಹೋಲಿಸುವುದು ಅರ್ಥವಿಲ್ಲದ ಕೆಲಸವಾಗಿದೆ.

ಆದಿಕಾಲದಲ್ಲಿ ಇದ್ದ ಜ್ಞಾನ ಪ್ರಸ್ತುತ ಕಾಲದಲ್ಲಿ ತಲೆಕೆಳಗಾಗಿದೆ. ಅದಕ್ಕೆ ಕಾರಣ ಮತದಲ್ಲಿ ಒಡಕುಗಳು, ಸ್ವಾರ್ಥ. ಪ್ರಾಚೀನಕಾಲದಲ್ಲಿ ಒಂದೇ ಒಂದು ಮತ ಇತ್ತು. ಕಾಲ ಕಳೆದು ಹೋಗುತ್ತಿದ್ದಂತೆ ಒಂದು ಮತದಿಂದಲೇ ಎಷ್ಟೋ ಮತಗಳು ಸೀಳಿವೆ. ಮೊದಲು ಮತವಾಗಿರುವುದು ಇಂದೂ ಮತ. ಆ ಮತವು ಈ ದಿನ ಹಿಂದೂ ಮತವಾಗಿದೆ. ಮೊದಲ ಇಂದೂ ಮತದಲ್ಲಿದ್ದ ಕೆಲವರು ಒಂದು ಗುಂಪಾಗಿ ಬದಲಾವಣೆಯಾಗಿ ನಾವು ದೊಡ್ಡವರೆಂದೆನಿಸಿಕೊಳ್ಳಬೇಕೆಂಬ ಉದ್ದೇಶದಿಂದ ನಮ್ಮದು ಶೈವ ಮತವೆಂದು, ಶೈವ ಮತದ ದೇವರು ಶಿವನೆಂದು, ಆ ಶಿವನೇ ಈ ಲಿಂಗವೆಂದು, ಆ ಲಿಂಗವನ್ನು ಪೂಜಿಸುವವರೆಲ್ಲರೂ ನಮ್ಮ ಶೈವರೇ ಎಂದು ಈಶ್ವರ ಲಿಂಗವನ್ನು ಪೂಜಿಸುವವರೆಲ್ಲರೂ ಶೈವರೆಂಬ ಅಭಿಪ್ರಾಯ ಬರುವಂತೆ ಮಾಡಿ ಅದಕ್ಕೆ ಬೇಕಾಗಿರುವ ಮಾರ್ಪಾಡುಗಳು ಅಥವಾ ಬದಲಾವಣೆಗಳು, ಜೋಡಣೆಗಳು, ಹೋಲಿಕೆಗಳು ಎಷ್ಟೆಷ್ಟೋ ಮಾಡಿದ್ದಾರೆ. ಹಾಗೆ ಮಾಡುವುದರಲ್ಲಿ ಈಶ್ವರ ಲಿಂಗದ ಮುಂದೆ ನಂದೀಶ್ವರನು, ಪಕ್ಕದಲ್ಲಿ ಪಾರ್ವತಿಯನ್ನು ಸಹ ಇಟ್ಟಿದ್ದಾರೆ.

ಶಿವನ ಸತಿ ಪಾರ್ವತಿ, ವಾಹನ ನಂದಿ. ಆದ್ದರಿಂದ ಇವರಿಬ್ಬರನ್ನು ಈಶ್ವರ ಲಿಂಗದೊಂದಿಗೆ ಸಂಬಂಧವಿರಿಸಿದ ಈಶ್ವರ ಲಿಂಗವು ಶಿವನ ಕೆಳಕ್ಕೆ ಲೆಕ್ಕ ಕಟ್ಟಬಹುದೆಂದು ಪಾರ್ವತಿಯನ್ನು ಪಕ್ಕದಲ್ಲಿ, ನಂದಿಯನ್ನು ಮುಂಭಾಗದಲ್ಲಿ ಇರಿಸಿದ್ದಾರೆ, ಲಿಂಗ ಪ್ರತಿಷ್ಠೆ ಮುಂಚೆಯೇ ಆದಿಯಲ್ಲಿ ನಡೆದಿದೆ. ಆದ್ದರಿಂದ ಪಾರ್ವತಿಯನ್ನು ಪ್ರತ್ಯೇಕಿಸಿ ಪಕ್ಕದಲ್ಲಿ ಇಟ್ಟಿದ್ದಾರೆ. ಆದರೆ ಆ ಲಿಂಗ ಪೀಠದಲ್ಲಿ ಸಂಬಂಧವಿರಸಲಾರದೇ ಹೋಗಿದ್ದಾರೆ. ಆದ್ದರಿಂದ ಎಲ್ಲಿಯಾದರೂ ಪಾರ್ವತಿ ಪ್ರತ್ಯೇಕವಾಗಿ ಪಕ್ಕದಲ್ಲಿ ಇರುತ್ತಾಳೆ. ಉಳಿದ ದೇವತೆಗಳಿಗೆ ಮಾತ್ರ ಗಂಡನ ಪೀಠದಲ್ಲಿಯೇ ಹೆಂಡತಿಯೂ ಸಹ ಇರುವುದನ್ನು ಗಮನಿಸಬಹುದು. ಹಾಗೆಯೇ ಅವರವರ ವಾಹನಗಳು ಸಹ ಆ ಪೀಠಗಳಲ್ಲಿಯೇ ಹೊಂದಿಸುವುದು ನಡೆದಿರುತ್ತದೆ. ಆದರೆ ಮೊದಲೇ ತಯಾರಾಗಿರುವ ಈಶ್ವರ ಲಿಂಗವನ್ನು ಏನೂ ಮಾಡಲಾಗದೇ ಪಾರ್ವತಿಯನ್ನು, ನಂದಿಯನ್ನು ಬೇರೆ ಬೇರೆಯಾಗಿ ಇಡುವುದು ನಡೆದಿದೆ. ಹಾಗೆ ಮಾಡುವುದೇ ಅಲ್ಲದೆ ಅದನ್ನು ಸಮರ್ಥಿಸಿ ಹೇಳುವುದಕ್ಕೆ ಪುರಾಣಗಳು ಸಹ ತಯಾರು ಮಾಡಲಾಗಿವೆ. ನಂದಿಯನ್ನು ಲಿಂಗಕ್ಕೆ ಎದುರಾಗಿ ಸ್ವಲ್ಪ ದೂರದಲ್ಲಿ ಇಟ್ಟು ಅದಕ್ಕು ಸಹ ಒಂದು ಕಟ್ಟು ಕಥೆ ಹೇಳಲಾಗಿದೆ. ಆಕಾರವಿಲ್ಲದ ದೇವರನ್ನು ಗುರುತಿಸುವುದಕ್ಕೆ ಮೂಗು ಮುಖವಿಲ್ಲದ ಕಲ್ಲನ್ನು ಶಂಕರನಾಗಿ ವರ್ಣಿಸುವ ನಿಮಿತ್ತವೂ ಸಹ ಒಂದು ಕಥೆ ಎಣೆದು ಶಾಪದಿಂದ ಶಂಕರನು ಗುಂಡಾಗಿ ಬದಲಾಗಿ ಹೋಗಿದ್ದಾನೆಂದು ವರ್ಣಿಸುವುದು ನಡೆದಿದೆ.

ಯಾವುದು ಏನಾದರೂ ಬುದ್ಧಿವಂತರು ಲಿಂಗಕ್ಕೂ, ಪಾರ್ವತಿಗೂ ಮತ್ತು ನಂದಿಗೂ ಸಂಬಂಧವಿಲ್ಲವೆಂದು ಸುಲಭವಾಗಿ ಗ್ರಹಿಸಬಲ್ಲರೆಂದು ಭಾವಿಸುತ್ತಿದ್ದೇವೆ. ಈ ಕಾಲದಲ್ಲಿಯೂ ಸಹ ಅಲ್ಲಲ್ಲಿ ಈಶ್ವರ ಪ್ರತಿಷ್ಟ ದೇವಾಲಯಗಳಲ್ಲಿ ಪಾರ್ವತಿ ಇರುವುದಿಲ್ಲ. ಒಂದು ನಂದಿ ಮಾತ್ರ ಲಿಂಗಕ್ಕೆ ಎದುರಾಗಿರುವುದು ಗ್ರಹಿಸಬಹುದು, ಪ್ರತ್ಯೇಕಿಸಿ ಪಾರ್ವತಿಯ ಮಂದಿರ ತಯಾರು ಮಾಡಲು ಹೆಚ್ಚು ಖರ್ಚಾಗುವುದರಿಂದ ಪಾರ್ವತಿಯನ್ನು ಬಿಟ್ಟುಹಾಕಿ ಮಂದಿರದಿಂದ ಪ್ರಯೋಜನವಿಲ್ಲದಿರುವ ನಂದಿಯನ್ನು ಮಾತ್ರವೇ ಇರಿಸಿರುವ ಈಶ್ವರ ದೇವಾಲಯಗಳು ಅಲ್ಲಲ್ಲಿ ಕಾಣಿಸುತ್ತಿವೆ.

ಜ್ಞಾನದೀಪ ಆರಿ ಹೋಗುವುದಿಲ್ಲ. ಆದ್ದರಿಂದ ಈದಿನ ಬಹಿರ್ಗತವಾಗುತ್ತಿದೆ ಎಂದು ನಾವು ಭಾವಿಸುತ್ತಿದ್ದೇವೆ. ಪೂರ್ವದಲ್ಲಿ ಹಿರಿಯರು ಎಷ್ಟೋ ಕೃಷಿ ಮಾಡಿ ಜ್ಞಾನವನ್ನು ಮೂರ್ತೀಭವಿಸಿ ನಿರ್ಮಿಸಿದ ಈಶ್ವರ ದೇವಾಲಯ ಶಂಕರನ ದೇವಾಲಯವಾಗಿ ಬದಲಾಗಿರುವುದು ನಮ್ಮ ದುರದೃಷ್ಟಕರ. ಆದರೂ ಹಿರಿಯರ ಕೃಷಿ ವ್ಯರ್ಥವಾಗಲಾರದು. ಆದ್ದರಿಂದ ಇಂದಿಗೂ ಶಿವನಗುಡಿ ಎಂದು ಹೇಳುವುದೇ ಅಲ್ಲದೆ ಈಶ್ವರ ದೇವಾಲಯವೆಂದು ಹೇಳುವುದೂ ಸಹ ಇದೆ. ಶಿವ, ಈಶ್ವರ ಬೇರೆಬೇರೆ ಎಂದು ಮುಖ್ಯವಾಗಿ ತಿಳಿಯಬೇಕು. ಈಶ್ವರನೆಂದರೆ ಅಧಿಪತಿ ಎಂದು ಮುಂಚೆಯೇ ತಿಳಿಸಿದ್ದೇವೆ. ಶಿವನೆಂದರೆ ತ್ರಿಮೂರ್ತಿಗಳಲ್ಲಿ ಒಬ್ಬನೆಂಬ ಭಾವನೆ ಇದೆ. ತ್ರಿಮೂರ್ತಿಗಳಿಗೂ ಸಹ ಅಧಿಪತಿ ಒಬ್ಬನೇ! ಆ ಒಬ್ಬನೇ ಈಶ್ವರ (ಪರಮಾತ್ಮ).

# 3. ಆಕಾರಪ್ರತಿಷ್ಠೆ (ಭಗವಂತನ ರೂಪ ಪ್ರತಿಷ್ಠೆ)

ಆದಿಯಲ್ಲಿಯೇ ಈಶ್ವರ ಲಿಂಗ ಪ್ರತಿಷ್ಠೆ ನಡೆದಿದೆ ಎಂದು ತಿಳಿದುಕೊಂಡಿದ್ದೇವೆ. ಇದು ಆಕಾರವಿಲ್ಲದ ದೇವರನ್ನು ಕುರಿತು ತಿಳಿಸುವ ವಿವರವಾಗಿದೆ. ಆಕಾರವಿಲ್ಲದೆ ಅಣುಅಣುವಿನಲ್ಲೂ ವ್ಯಾಪಿಸಿಕೊಂಡಿರುವ ದೇವರ ವಿಷಯ ಮಾನವರಿಗೆ ತಿಳಿದಿಲ್ಲ. ದೇವರ ವಿಷಯ ದೇವರಿಗೇ ತಿಳಿದಿದೆ. ಆದ್ದರಿಂದ ಆತನ ವಿವರವನ್ನು ಆತನೇ ಮಾನವರಿಗೆ ತಿಳಿಸಬೇಕಾಗಿದೆ. ಸ್ವತಃವಾಗಿ ಮಾನವನು ದೇವರ ವಿಷಯವನ್ನು ತಿಳಿಯಲಾರನು. ಆದ್ದರಿಂದ ಧರ್ಮಗಳನ್ನು ದೇವರೇ ತಿಳಿಸಬೇಕಾಗಿದೆ. ಮಾನವನು ಧರ್ಮ ಪ್ರತಿಷ್ಠಾಪನೆ ಮಾಡಲಾರನು. ದೇವರು ತನ್ನ ಧರ್ಮಗಳನ್ನು ತಾನೇ ತಿಳಿಸುವುದಕ್ಕಾಗಿ ರೂಪವಿಲ್ಲದ ತಾನು ಒಂದು ರೂಪವನ್ನು ಕಲ್ಪಿಸಿಕೊಂಡು ಹುಟ್ಟಬೇಕಾಗಿದೆ. ಎಲ್ಲಾ ಕಡೆಗೂ ವ್ಯಾಪಿಸಿದ್ದೂ ಒಂದು ಶರೀರದಲ್ಲಿ ಮಾಯೆಯಿಂದ ಕೂಡಿದ ಜನ್ಮ ತೆಗೆದುಕೊಂಡು ಆ ಶರೀರದ ಮೂಲಕ ಆತನು ತಿಳಿಸಬೇಕಾಗಿರುವ ಜ್ಞಾನವನ್ನು ಧರ್ಮ

ಯುಕ್ತವಾಗಿ ತಿಳಿಸಿ ಹೋಗುತ್ತಾನೆ. ಆ ವಿಧವಾಗಿ ಜನ್ಮಿಸಿರುವ ಅವನನ್ನು "ಭಗವಂತ" ಎನ್ನುತ್ತಾರೆ. ಭಗದಿಂದ ಹುಟ್ಟಿದವನನ್ನು ಭಗವಂತ ಎನ್ನುತ್ತೇವೆ. ಸರ್ವ ಶರೀರಗಳಲ್ಲಿಯೂ, ಸರ್ವ ಜಡ ಪದಾರ್ಥಗಳಲ್ಲಿಯೂ, ವಿಶ್ವದಾದ್ಯಂತ ಅಣುಅಣುವಿನಲ್ಲಿಯೂ ವ್ಯಾಪಿಸಿಕೊಂಡಿರುವವನು ಪರಮಾತ್ಮ. ಅದು ಎಲ್ಲಾಕಡೆ ವ್ಯಾಪಿಸಿಕೊಂಡಿದ್ದು ಅದೇ ಒಂದು ಶರೀರದಲ್ಲಿ ನಿವಾಸಿಸುತ್ತಿರುವಾಗ ಅದನ್ನು ಅಥವಾ ಅವನನ್ನು ಭಗವಂತ ಎನ್ನುತ್ತೇವೆ.



**ಆಕಾರಪ್ರತಿಷ್ಠೆ (ಭಗವಂತನ ರೂಪ ಪ್ರತಿಷ್ಠೆ)**

ವಿಶ್ವವೆಲ್ಲಾ ವ್ಯಾಪಿಸಿರುವ ರೂಪವಿಲ್ಲದ ದೇವರನ್ನು ಕುರಿತು ತಿಳಿಸಲು ಪ್ರತಿರೂಪವಾಗಿ ಲಿಂಗಪ್ರತಿಷ್ಠೆ ಮಾಡಿದ್ದೇವೆ. ಅದೇ ದೇವರು ಆಗಾಗ ತನಗೆ ಅವಶ್ಯವೆಂದಾಗ ತನ್ನ ವಿಷಯ ತಿಳಿಸುವ ಸಲುವಾಗಿ ತಾನೇ ಒಂದು ಶರೀರದಲ್ಲಿ

ಜನ್ಮಿಸುವನು ಎನ್ನುವುದಕ್ಕೆ ಗುರುತಾಗಿ ಆಕಾರವಿರುವ ದೇವರನ್ನು ಸಹ ತೋರಿಸುವುದಕ್ಕಾಗಿ ಮೂಗು ಮುಖವಿರುವ ಪ್ರತಿಮೆಗಳಿರುವ ಆಲಯಗಳನ್ನು ಸಹ ಹಿರಿಯರು ತಯಾರು ಮಾಡಿದ್ದಾರೆ. ಪ್ರಪಂಚದಲ್ಲಿ ಮೊಟ್ಟಮೊದಲು ಈಶ್ವರಲಿಂಗ ದೇವಾಲಯಗಳು ತಯಾರಾಗಿ ಆನಂತರ ಸ್ವಲ್ಪ ಕಾಲಕ್ಕೆ ಪರಮಾತ್ಮನೇ ಮಾನವ ರೂಪದಲ್ಲಿ ಬರುವನೆಂದು ತಿಳಿದ ಹಿರಿಯರು ಆಕಾರವಿರುವ ದೇವರನ್ನು ತಿಳಿಸುವ ದೇವಾಲಯಗಳನ್ನು ತಯಾರು ಮಾಡಿದ್ದಾರೆ. ಆ ಕಾಲದಲ್ಲಿ ಲಿಂಗದ ನಂತರ ತಯಾರಾದ ಪ್ರತಿಮೆಯ ಗುಡಿ ಶ್ರೀರಂಗ ದೇವಾಲಯ. ಪರಮಾತ್ಮ ಗರ್ಭದಿಂದ ಹುಟ್ಟಿದ ಜನ್ಮವನ್ನು ಸೂಚಿಸುವುದು ಶ್ರೀರಂಗ ದೇವಾಲಯ. ಆದ್ದರಿಂದ ಶ್ರೀರಂಗನು ಗತ ಚರಿತ್ರೆಯಿಲ್ಲದವನು. ಚರಿತ್ರೆ ಇರುವ ದೇವಾಲಯಗಳು ನಂತರ ಎಷ್ಟೋ ತಯಾರಾಗಿವೆ ಆದರೆ ಶ್ರೀರಂಗನಿಗೆ ಚರಿತ್ರೆಯಿಲ್ಲ. ಆಕಾರವಿಲ್ಲದ ನಿರ್ವಿಕಾರನು ಸಾಕಾರವಾಗಿ ಬಂದಿರುವ ಗುರುತಾಗಿ ತೋರಿಸಿರುವ ಪ್ರತಿಮೆ ಯಾಗಿ ಶ್ರೀರಂಗನನ್ನು ನೆನೆಯಬೇಕು. ನಿರ್ವಿಕಾರ ಪರಮಾತ್ಮನನ್ನು ಲಿಂಗಾಕೃತಿ ಯಾಗಿ ತೋರಿಸಿ ಕೆಳಗೆ ಪಾಣಿಮಟ್ಟದ ಮೇಲೆ ವಿಭೂತಿ ರೇಖೆಗಳು, ಧಾರಾ ಪಾತ್ರೆಯನ್ನು ಏರ್ಪಡಿಸಿ ಎಷ್ಟೋ ಅರ್ಥವನ್ನು ತಿಳಿಸಿದವರು ಶ್ರೀರಂಗನ ಮೇಲೂ ಸಹ ಅನೇಕ ಪಾರಮಾರ್ಥಿಕ ಅರ್ಥಗಳನ್ನು ತಿಳಿಸಿದ್ದಾರೆ. ಆತನ ಆಕಾರವೇ ದೊಡ್ಡ ಆಧ್ಯಾತ್ಮಿಕ ಸಂದೇಶವಾಗಿದೆ.

ಹೀಗೆ ಪೂರ್ವದಲ್ಲಿ ತಯಾರಾದ ಲಿಂಗವು, ಶ್ರೀರಂಗ ದೇವಾಲಯ ಗಳಲ್ಲಿ ಈಶ್ವರಾಲಯವನ್ನು ಕುರಿತು ಪುರಾಣಗಳನ್ನು ಸೃಷ್ಟಿಸಿ ಇದು ತ್ರಿಮೂರ್ತಿ ಗಳಲ್ಲಿ ಒಬ್ಬನಾದ ಶಂಕರನ ಆಲಯವೆಂದು ಶೈವರು ಹೇಳಿಕೊಂಡರೆ ಅವರಿಗೆ ವ್ಯತ್ಯಾಸವಾಗಿ ವೈಷ್ಣವರು ತಯಾರಾಗಿ ಶ್ರೀರಂಗನ ಆಲಯ ನಮ್ಮದೆಂದು ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣುವಿನ ಆಲಯವೇ ಶ್ರೀರಂಗನ ಆಲಯವೆಂದು ಪುರಾಣಗಳನ್ನು ತಯಾರುಮಾಡಿಕೊಂಡು ಪ್ರಚಾರ ಮಾಡಿಕೊಂಡಿದ್ದಾರೆ. ತ್ರಿಮೂರ್ತಿಗಳಲ್ಲಿ ಶಿವನು ಶಂಕರನೆಂದು ಹೆಸರು ಪಡೆದಿದ್ದರೂ ಶಿವನೇ ದೊಡ್ಡವನೆಂದು ಶೈವರು ಹೇಳಿಕೊಳ್ಳುತ್ತಿರುವಾಗ, ಹಾಗೆ ಅಲ್ಲವೇ ಅಲ್ಲವೆಂದು

ಶಿವನಿಗಿಂತಲೂ ವಿಷ್ಣುವೇ ದೊಡ್ಡವನೆಂದು ವೈಷ್ಣವರು ಹೇಳಿಕೊಳ್ಳುತ್ತಿದ್ದಾರೆ. ಶಿವನೇ ದೊಡ್ಡವನೆಂದು ಶಿವಪುರಾಣವನ್ನು ಶೈವರು ತಯಾರುಮಾಡಿಕೊಂಡರೆ, ವಿಷ್ಣುವೇ ದೊಡ್ಡವನೆಂದು ವಿಷ್ಣು ಪುರಾಣವನ್ನು ವೈಷ್ಣವರು ತಯಾರು ಮಾಡಿಕೊಂಡಿದ್ದಾರೆ. ಲಿಂಗವು ನಮ್ಮ ಮತವೆನ್ನುವಂತೆ ಲಿಂಗದ ಮೇಲಿನ ವಿಭೂತಿ ರೇಖೆಗಳನ್ನು ಶೈವರು ಗುರುತಿಗೆ ಹಣೆಯ ಭಾಗದಲ್ಲಿ ಇಟ್ಟುಕೊಂಡರೆ, ವೈಷ್ಣವರು ನಮ್ಮದಾರಿ ಬೇರೆ ಎನ್ನುವಂತೆ ಶ್ರೀರಂಗನ ಹಣೆಯ ಮೇಲಿನ ನಾಮವನ್ನು ತಮ್ಮ ಹಣೆಯಭಾಗದಲ್ಲಿ ತಿದ್ದಿಕೊಂಡಿದ್ದಾರೆ. ಈ ವಿಧವಾಗಿ ಇಂದೂ ಮತದಲ್ಲಿ ಮೊದಲು ಶೈವರೆಂಬ ಒಂದು ಭಾಗ ಆಗುತ್ತಲೇ ನಂತರ ಅವರಿಗೆ ಸ್ವಲ್ಪ ವಿರುದ್ಧ ದಿಕ್ಕಿನಲ್ಲಿ ವೈಷ್ಣವರ ಗುಂಪು ತಯಾರಾಗಿದೆ. ಪ್ರಜೆಗಳನ್ನು ನಾಮದಾರರು ಮೋಡಿಕಾರರನ್ನಾಗಿ ಬದಲಾಯಿಸಿ ಭೇದವನ್ನುಂಟು ಮಾಡಿದ್ದಾರೆ. ಪೂರ್ವದಲ್ಲಿ ಹಿರಿಯರು ಪ್ರಜೆಗಳಿಗೆ ದೈವ ಜ್ಞಾನವನ್ನು ತಿಳಿಸಲು ಎಷ್ಟೋ ಯೋಚಿಸಿ ರೂಪವಿಲ್ಲದ ದೇವರನ್ನು ರೂಪವಿರುವ ದೇವರನ್ನು ತಯಾರು ಮಾಡಿ ತೋರಿಸಿದರೆ, ದೈವಕ್ಕೆ ವಿರುದ್ಧವಾದ ಮಾಯೆ ಪ್ರಜೆಗಳನ್ನು ಬೇರೊಂದು ದಾರಿ ಹಿಡಿಸಿ ಸಾಕಾರ ನಿರ್ವಿಕಾರವಾಗಿ ತೋರಿಸಿದ ದೈವವನ್ನು ಗುಂಪುಗಳ ರೂಪದಲ್ಲಿ ಅರ್ಥವಾಗುವಂತೆಮಾಡಿದೆ. ಅಂದಿಗೂ ಇಂದಿಗೂ ಲಿಂಗಾಕಾರ ವಿರುವ ದೇವಾಲಯ ಒಂದೇಯಾದರೂ ಮೂಗು ಮುಖ ಆಕಾರವಿರುವ ಆಲಯಗಳು ಅನೇಕ ಜನರ ಹೆಸರುಗಳಿಂದ ತಯಾರಾಗಿವೆ. ವೈಷ್ಣವರು ಬಹಳಜನ ನಾಮವಿರುವ ದೇವರುಗಳನ್ನು ತಯಾರು ಮಾಡಿಕೊಂಡಿದ್ದಾರೆ. ಪೂರ್ವದಲ್ಲಿ ಉದ್ದೇಶಪೂರ್ವಕವಾಗಿ ಒಂದು ಪದ್ಧತಿಯಿಂದ ಶ್ರೀರಂಗನ ದೇವಾಲಯವನ್ನು ನಿರ್ಮಿಸಿದರೆ ನಂತರ ಮಾನವರು ಉಳಿದ ದೇವತೆಗಳ ಹೆಸರಿಟ್ಟು ನಿರ್ಮಿಸು ವುದು ಮಾಯೆ ಪ್ರಭಾವವೇ ಎಂದು ಹೇಳಬಹುದು. ಪೂರ್ವದಲ್ಲಿ ದೊಡ್ಡವರು ಪ್ರಜೆಗಳ ಜ್ಞಾನಾರ್ಥವಾಗಿ ಸಾಕಾರವೇ ನಿರಾಕಾರ, ನಿರಾಕಾರವೇ ಸಾಕಾರವಾಗುವು ದೆಂಬ ಉದ್ದೇಶದಿಂದ ನಿರಾಕಾರಲಿಂಗವನ್ನು ಸಾಕಾರ ಶ್ರೀರಂಗನ ಆಲಯಗಳನ್ನು ಕೃತಯುಗದಲ್ಲಿಯೇ ನಿರ್ಮಿಸಿದ್ದಾರೆ. ಕೃತಯುಗದ ಮೊದಲ ಅಂಕ ಕೆಲವು ಸಂವತ್ಸರಗಳಲ್ಲಿಯೇ ಶಿವಾಲಯವನ್ನು ಮತ್ತು ಶ್ರೀರಂಗಾಲಯವನ್ನು

ನಿರ್ಮಿಸಿದ್ದಾರೆ. ಆ ಮೊದಲ ದೇವಾಲಯಗಳು ಎಲ್ಲಿ ನಿರ್ಮಿಸಿರುವುದು ಎಂಬುದನ್ನು ತಿಳಿಯದೇ ಹೋಗಿದ್ದರಿಂದ ಚಿಂತಿಸುತ್ತಿದ್ದೇವೆ. ಲಿಂಗವೆಂದರೆ ಪುರುಷನ ಗುರುತು, ಪ್ರಪಂಚಕ್ಕೆಲ್ಲಾ ಒಡೆಯನಾಗಿರುವ ಪುರುಷನೊಬ್ಬನಿದ್ದಾನೆಂದು ತಿಳಿಸುತ್ತಾ ಜಗದ ಒಡೆಯನನ್ನು ತಿಳಿಸುವ ಲಿಂಗವನ್ನಿರಿಸಿ ಅದರ ಮೇಲೆ ತ್ರೈತ ಪುರುಷರ ಗುರುತಾಗಿ ಅಂದರೆ ಜೀವಾತ್ಮ, ಆತ್ಮ, ಪರಮಾತ್ಮನ ಗುರುತಾಗಿ ಮೂರು ಅಡ್ಡರೇಖೆಗಳನ್ನಿರಿಸಿದ್ದಾರೆ. ಆ ವಿಧವಾಗಿಯೇ ಪರಮಾತ್ಮ ಜನ್ಮ ತೆಗೆದುಕೊಂಡರೆ ಪುರುಷನಾಗಿಯೇ ಜನ್ಮಿಸುತ್ತಾನೆನ್ನುವಂತೆ ಪುರುಷಾಕಾರವಾದ ಶ್ರೀರಂಗ ಪ್ರತಿಮೆಯನ್ನು ನಿರ್ಮಿಸಿದ್ದಾರೆ. "ಶ್ರೀ" ಎಂದರೆ ಶುಭಕರವಾದ ಮೋಕ್ಷವನ್ನು ಸೂಚಿಸಿದರೆ, "ರಂ" ಎಂಬುದು ಮಂತ್ರ ಬೀಜಾಕ್ಷರವಾಗಿದೆ. "ರಂ" ನಾಶ ಮಾಡುವುದೆಂದು "ಗ" ಎಂದರೆ ಗತಿಗಳು ಎಂದು ರಂಗ ಎಂದರೆ ಹುಟ್ಟು ಸಾವುಗಳನ್ನು ಗತಿಗಳನ್ನು ಇಲ್ಲದಂತೆ ಮಾಡುವವನೆಂದು, ಕರ್ಮ ಗತಿಗಳು ಇಲ್ಲದಂತೆ ಮಾಡುವವನೆಂದು ಮೋಕ್ಷವನ್ನುಂಟು ಮಾಡುವ ವನೆಂದು ಅರ್ಥಬರುವಂತೆ ಹೆಸರನ್ನಿರಿಸಿದ್ದಾರೆ. ಶೂನ್ಯವಾದ ಪರಮಾತ್ಮನಿಂದ ಹುಟ್ಟಿ ಬಂದವನು ಶ್ರೀರಂಗ ಎಂದು ತಿಳಿಸುವಂತೆ ಭೂಮಿಯ ಮೇಲೆ ಹುಟ್ಟಿ ಗತಿಸಿದ ಚರಿತ್ರೆ ಇರುವವರನಲ್ಲದೆ, ಚರಿತ್ರೆಯಿಲ್ಲದ ಎಲ್ಲಿಯೊ ಹುಟ್ಟಿ ಮರಣಿ ಸಿದವನಲ್ಲದ ಶ್ರೀರಂಗನನ್ನು ಪ್ರತಿಮೆಯಾಗಿ ಇಟ್ಟು ತೋರಿಸಿದ್ದಾರೆ. ಹಾಗೆ ಚರಿತ್ರೆಯಿಲ್ಲದವನನ್ನು ಇಡುವುದರಲ್ಲಿ ಪರಮಾತ್ಮ ನಿರಾಕಾರನಾದವನು ಗತಜನ್ಮ ಇಲ್ಲದವನು ಎಲ್ಲಾ ವ್ಯಾಪಿಸಿರುವ ಶೂನ್ಯನು ಎಂದು ತಿಳಿಸುವ ಅರ್ಥವಿದೆ. ಹುಟ್ಟಿದ ಸಾಮಾನ್ಯನು ಗ್ರಹ, ವಿಗ್ರಹ ಆಗಬಲ್ಲನು, ಹುಟ್ಟದವನು ಗ್ರಹವಾಗಲಿ, ವಿಗ್ರಹವಾಗಲಿ ಆಗಲಾರ. ಆದ್ದರಿಂದ ಶ್ರೀರಂಗನ ಪ್ರತಿಮೆ ವಿಗ್ರಹವಲ್ಲ. ಉಳಿದ ಪ್ರತಿಮೆಗಳೆಲ್ಲ ವಿಗ್ರಹಗಳಾಗುತ್ತವೆ. ಪೂರ್ವದಲ್ಲಿ ಈ ವಿಧವಾಗಿ ರೂಪವಿಲ್ಲದವನಿಗೆ ಒಂದು ರೂಪ ಕಲ್ಪಿಸಿ ಭಗವಂತನಾಗಿ ಪರಮಾತ್ಮ ಬರಬಲ್ಲನೆಂದು ತಿಳಿಸಿದರೆ ಕಾಲ ಕ್ರಮೇಣ ಪೂರ್ವದ ಜ್ಞಾನಿಗಳಿರಿಸಿದ ಭಾವನೆ, ಅದರ ಜ್ಞಾನವೆಲ್ಲ ತಿಳಿಯದೇ ಹೋಗಿದೆ. ಇಂದಿನ ಕಾಲಕ್ಕೆ ದೇವಾಲಯಗಳೆಲ್ಲ ಚರಿತ್ರೆ ಇರುವವರವೇ ಆಗಿವೆ.

ಹುಟ್ಟಿ ಸಾಯದ ರಂಗನ ದೇವಾಲಯವು ಅಂದಿನ ಗುರುತಾಗಿ ಎಲ್ಲೊ ಒಂದು ಕಡೆ ಇದ್ದರೆ ಈದಿನ ಅನೇಕವಾಗಿ ಸತ್ತು ಹುಟ್ಟಿದ ಅವರ ಆಲಯಗಳು ಅನೇಕ ಹೆಸರುಗಳಿಂದ ತಯಾರಾಗಿವೆ. ಕೊನೆಗೆ ನೂರು ಸಂವತ್ಸರಗಳ ಕೆಳಗೆ ಸತ್ತು ಹೋದ ಮಾನವರನ್ನು ಸಹ ಆಲಯಗಳಲ್ಲಿ ಪ್ರತಿಷ್ಠಿಸಿ ಕೈಮುಗಿಯಲು ಪ್ರಾರಂಭ ಮಾಡಿದ್ದೇವೆ. ಇದೆಲ್ಲವೂ  ಮಾಯೆ ಪ್ರಭಾವವೇ ಎಂದು ಅರ್ಥವಾಗುತ್ತಿದೆ. ಪರಮಾತ್ಮನನ್ನು ತಿಳಿಯದೇ ಪರಮಾತ್ಮನ ಜ್ಞಾನವು ಯಾವ ವಿಧದಿಂದಲೂ ಅರ್ಥವಾಗದಂತೆ ಮಾಡುವುದೇ ಮಾಯೆಯ ಒಂದು ಕೆಲಸವಾಗಿದೆ. ಮಾಯಾ ಪ್ರಭಾವಿತರಾದ ಮನುಷ್ಯರೆಲ್ಲರೂ ಭಕ್ತಿ ಮಾರ್ಗದಲ್ಲಿದ್ದರೂ ಆ ಭಕ್ತಿ ಪರಮಾತ್ಮನ ಮೇಲೆ ಅಲ್ಲ ಮಾಯೆವೊಂದರ ಭಕ್ತಿಯೆಂದು ತಿಳಿಯುತ್ತಿದೆ.

ಈಗಲಾದರೂ ಮೀರಿ ಹೋಗಿರುವುದಿಲ್ಲ. ನಮ್ಮ ಸಾಂಪ್ರದಾಯಗಳನ್ನು ಹಿರಿಯರ ಸಂದೇಶಗಳನ್ನು ಗೌರವಿಸೋಣ. ಜನ್ಮ ರಾಹಿತ್ಯವನ್ನು ಉಂಟು ಮಾಡುವ ಭಕ್ತಿ ಮಾರ್ಗವನ್ನು ಅನುಸರಿಸೋಣ. ಗ್ರಹ ಆರಾಧನೆಯನ್ನು ಬಿಟ್ಟು ಭಗವಂತನ ಆರಾಧನೆ ಮಾಡೋಣ. ಆಲಯದಲ್ಲಿರುವ ಪ್ರತಿಮೆಗಳೆಲ್ಲ ದೇವರ ಪ್ರತಿಬಿಂಬಗಳಲ್ಲವೆಂದು ತಿಳಿದುಕೊಳ್ಳೋಣ. ಸಂಪ್ರದಾಯ ದೇವಾಲಯಗ ಳನ್ನು ದರ್ಶಿಸಿ ಅದರಲ್ಲಿನ ಅಂತರಾರ್ಥವನ್ನು ತಿಳಿದುಕೊಳ್ಳೋಣ. ಜ್ಞಾನವನ್ನು ಪ್ರದರ್ಶಿಸುತ್ತಿರುವ ಆಲಯಗಳಲ್ಲಿನ ಚಿಹ್ನೆಗಳನ್ನು ಅರ್ಥಮಾಡಿಕೊಳ್ಳೋಣ. ಇಂದೂ ಮತದಲ್ಲಿ ಸನಾತನ ಧರ್ಮಗಳು ಇವೆಯೆಂದು ಅವು ಯಾವ ಮತಕ್ಕೂ ವಿರುದ್ಧವಾಗಿಲ್ಲವೆಂದು ತಿಳಿದುಕೊಳ್ಳೋಣ. ನಮ್ಮ ವಿಧಾನವನ್ನು ನಾವು ತಿಳಿದುಕೊಳ್ಳದೇ ಇರುವಾಗ ಈ ಮತದಲ್ಲಿ ಏನೂ ಇಲ್ಲವೆಂದು ಇತರೆ ಮತದಲ್ಲಿ ಏನೋ ಇದೆಯೆಂದು ಮತ ಬದಲಾವಣೆಗಳಿಗೆ ದಾರಿ ಕಾಣುವ ಅವಕಾಶವಿದೆ.

# 4. ಮೂಲದ ಅಮ್ಮ ದೊಡ್ಡಮ್ಮ

ವಿಶ್ವದಲ್ಲೆಲ್ಲಾ ಅಣುಅಣುವಿನಲ್ಲೂ ವ್ಯಾಪಿಸಿಕೊಂಡು ಸರ್ವರಲ್ಲೂ ಇರುವ ಪರಮಾತ್ಮನನ್ನು ಹೆಸರು ಆಕಾರವಿಲ್ಲದ ದೇವರಾಗಿ ತಿಳಿಸುತ್ತಾ ಲಿಂಗರೂಪವನ್ನು ನಿರ್ಮಿಸಿದ್ದಾರೆ. ಅದೇ ದೇವರು ತನ್ನ ವಿಷಯವನ್ನು ತಾನೇ ಮಾನವರಿಗೆ ತಿಳಿಸುವ ಸಲುವಾಗಿ ತನ್ನಲ್ಲಿನ ಭಾಗ (ಅಂಶ) ದಿಂದ ಆಕಾರವಿರುವ ಭಗವಂತನಾಗಿ ಹುಟ್ಟುವನೆಂದು ತಿಳಿಸುವುದಕ್ಕಾಗಿ ಆಕಾರವಿರುವ ಪ್ರತಿಮೆಯ ರೂಪವನ್ನು ನಿರ್ಮಿಸಿದ್ದಾರೆ. ಈ ವಿಧವಾಗಿ ಮೊದಲು ಈಶ್ವರಲಿಂಗ ಆಲಯ ನಂತರ ಭಗವಂತನ ಆಕಾರವಿರುವ ಆಲಯ ತಯಾರಾಗಿವೆ. ಈಗ ಒಂದು ಸಂಶಯ ಬಂದು ಹೆಣ್ಣು ದೇವತೆಗಳು ಎಷ್ಟೋ ಮಂದಿ ಇದ್ದಾರಲ್ಲವೇ! ಅವರ ದೇವಾಲಯಗಳು ಯಾವಾಗ ತಯಾರಾಗಿವೆ ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಸವಿವರವಾಗಿ ಹೀಗೆ ಇದೆ.

ಆದಿ ಮಧ್ಯಾಂತ ರಹಿತನು ಎಂದರೆ ಮೊದಲು ನಡುವೆ ಕೊನೆ ಎಂಬುದು ಇಲ್ಲದವನೆಂದು ಅರ್ಥ. ಮತ್ತೊಂದು ವಿಧದಲ್ಲಿ ಹುಟ್ಟು ಎಂದರೆ ಮೊದಲು, ಬೆಳೆಯುವುದೆಂದರೆ ನಡುವೆ, ಮರಣವೆಂದರೆ ಕೊನೆ ಎನ್ನುವವು ಇಲ್ಲದವನೆಂದು ಅರ್ಥ. ಇದನ್ನೇ ಹುಟ್ಟು ಸಾವುಗಳಿಲ್ಲದವನೆಂದು ಒಂದು ಮಾತಿನಲ್ಲಿ ಹೇಳಬಹುದು. ಆದಿ ಮಧ್ಯಾಂತ ರಹಿತ ಎನ್ನುವುದು ಹೆಸರು ಅಲ್ಲವೆಂದು ದೇವರ ಒಂದು ಹಿರಿಮೆಯನ್ನು, ಆತನ ಒಂದು ಸ್ಥಿತಿಯನ್ನು ತಿಳಿಸುತ್ತಿದೆಯೆಂದು ಅರ್ಥವಾಗುತ್ತಿದೆ. ಪ್ರಭು ಎಂದರೆ, ಭು ಎಂದರೆ ಹುಟ್ಟಿರುವುದು, ಪ್ರ ಎಂದರೆ ಮುಖ್ಯವಾದುದು, ಸಾರಾಂಶವಾದುದು, ದೊಡ್ಡದು ಎಂಬ ಅರ್ಥವಿದೆ. ಹುಟ್ಟಿದವುಗಳಿಗೆಲ್ಲ ಅತೀತವಾದುದು, ಸೃಷ್ಟಿಗೆಲ್ಲಾ ಮುಖ್ಯ ವಾದುದು ಮತ್ತು ದೊಡ್ಡದು, ಸಾರಾಂಶವಿದೆ ಎಂಬ ಅರ್ಥವಿದೆ ಆದ್ದರಿಂದ ಪ್ರಭು ಎಂಬುದು ಸಹ ಹೆಸರು ಅಲ್ಲ.

ಸೃಷ್ಟಿಗೆಲ್ಲಾ ಕ್ಷರ, ಅಕ್ಷರನೆಂಬ ಪುರುಷರಿರುವಾಗ ಅವರಿಬ್ಬರಿಗಿಂತಲೂ ಅತೀತವಾದ, ಅನ್ಯವಾದ, ಉತ್ತಮನಾದವನು ಪರಮಾತ್ಮ, ಆದ್ದರಿಂದ ಅದೇ ಅರ್ಥದಿಂದ ಪುರುಷೋತ್ತಮ ಎಂದಿದ್ದಾರೆ. ಪುರುಷೋತ್ತಮ ಎನ್ನುವುದು ಸಹ ಹೆಸರು ಅಲ್ಲವೆಂದು ಆತನ ಘನತೆಯನ್ನು ತಿಳಿಸುವ ಪದವೆಂದು ತಿಳಿಯಬೇಕು. ಪರಮಾತ್ಮನಿಗೆ ಒಂದು ನಿವಾಸ ಸ್ಥಳವಂತೂ ಇಲ್ಲ. ಒಂದು ಊರಂತೂ ಇಲ್ಲದ ಆತನು ವಿಶ್ವದಾದ್ಯಂತ ವ್ಯಾಪಿಸಿಕೊಂಡಿದ್ದಾನೆ. ಒಂದು ಸ್ಥಳ, ಊರು ಇಲ್ಲದವನು ಆದ್ದರಿಂದ ನಿವಾಸಕ್ಕೆ ಅತೀತನಾದವನು ಎಂಬ ಅರ್ಥ ಬರುವಂತೆ ಪರಂಧಾಮ ಎಂದಿದ್ದಾರೆ. ಪರಂಧಾಮ ಎನ್ನುವುದೂ ಸಹ ಆತನ ವ್ಯಾಪಕವನ್ನು ತಿಳಿಸುವ ಪದವೇ ಹೊರತು ಒಂದು ಹೆಸರು ಅಲ್ಲ. ಆತ್ಮ ಜೀವಾತ್ಮರು ಪರಮಾತ್ಮನ ಅಂಶದಿಂದ ಇವೆ. ಜೀವಾತ್ಮನಿಗಿಂತ ಆತ್ಮ ಎಷ್ಟೋ ದೊಡ್ಡದಾಗಿದ್ದರೆ, ಆತ್ಮನಿಗಿಂತ ಬೇರೆಯಾದವನು ಪರಮಾತ್ಮ, ಪರ ಎಂದರೆ ಬೇರೆ ಎಂದು ಅರ್ಥ. ಪರಮಾತ್ಮ ಎಂದರೆ ಆತ್ಮ ಸಹ ಅಲ್ಲದೇ ಅದಕ್ಕಿಂತಲೂ ಬೇರೆಯಾಗಿರುವವನೆಂದು ಅರ್ಥ. ಪರಮಾತ್ಮ ಎಂಬ ಈ ಪದವೂ ಸಹ ಹೆಸರು ಅಲ್ಲವೆಂದು ತಿಳಿಯಬೇಕು.

ಪ್ರಪಂಚದಲ್ಲಿನ ಎಲ್ಲರನ್ನು ಆಡಿಸುವುದನ್ನು ಕೆಲಸ ಮಾಡಿಸುವುದನ್ನು ವಿಧಿ ಅಥವಾ ಕರ್ಮ ಎಂದು ಅನ್ನುತ್ತೇವೆ. ಯಾರೂ ಸಹ ತಾನು ಸ್ವತಃವಾಗಿ ಯಾವ ನಿರ್ಣಯವನ್ನು ತೆಗೆದುಕೊಳ್ಳಲಾರ, ಯಾವ ಕೆಲಸವನ್ನು ಮಾಡಲಾರ. ಎಲ್ಲರೂ ಕರ್ಮಾಧೀನದಲ್ಲಿದ್ದು ಅದರ ಪ್ರಕಾರವಾಗಿ ನಡೆದುಕೊಳ್ಳಬೇಕಾಗಿದೆ. ಪರಮಾತ್ಮನೊಬ್ಬನು ಮಾತ್ರ ಕರ್ಮದ ಅಧೀನದಲ್ಲಿಲ್ಲ. ಎಲ್ಲರನ್ನು ಆಡಿಸುವಂತೆ ಕರ್ಮ ಪರಮಾತ್ಮನನ್ನು ಆಡಿಸಲಾರದು. ಪರಮಾತ್ಮನ ಅಧೀನದಲ್ಲಿ ಕರ್ಮವಿದೆ ಆದರೆ, ಅದರ ಅಧೀನದಲ್ಲಿ ಆತನು ಇಲ್ಲ. ಏನಾದರೂ ಮಾಡಬೇಕಾದರೆ ಪರಮಾತ್ಮನೇ ಸ್ವತಃವಾಗಿ ನಿರ್ಣಯ ತೆಗೆದುಕೊಂಡು ತಾನೇ ಸ್ವತಃವಾಗಿ ಮಾಡಬಲ್ಲನು. ಯಾವುದನ್ನಾದರೂ ತಾನೇ ಖುದ್ದಾಗಿ ಮಾಡಬಲ್ಲನು. ಆದ್ದರಿಂದ ಇಂತಹವನೆಂದು ತಿಳಿಸುವ ಸಲುವಾಗಿ ಆತನನ್ನು ಖುದಾ ಎಂದಿದ್ದಾರೆ. ಖುದಾ

ಎನ್ನುವುದು ಸ್ವಂತ ನಿರ್ಣಯಾಧಿಕಾರಿಯನ್ನು ತಿಳಿಸುವ ಪದವೇ ಹೊರತು ಹೆಸರು ಅಲ್ಲ.

ಪರಮಾತ್ಮ ಕಾಣಿಸುವವನಲ್ಲ, ಕೇಳಿಸುವವನೂ ಅಲ್ಲ. ಯಾವ ಇಂದ್ರಿಯಕ್ಕೂ ತಿಳಿಯದ ಇಂದ್ರಿಯಾತೀತನು. ಶರೀರದಿಂದಿರುವವನು ಯಾರೇ ಆಗಲಿ ಯಾವ ಸಾಧನೆಯಿಂದಾಗಲಿ ಆತನನ್ನು ತಿಳಿಯಲಾರರು. ಯೋಗಿಗಳಿಗೂ ಸಹಿತ ವ್ಯಕ್ತವಾಗದವನು. ಪ್ರಪಂಚವೆಲ್ಲಾ ವ್ಯಾಪಿಸಿ ನಮಗೆ ಹೊರಗೆ, ನಮ್ಮ ಮುಂದೆ, ನಮ್ಮ ಒಳಗೂ ಸಹ ಇರುವ ಪರಮಾತ್ಮನು ಯಾರಿಗೂ ಯಾವ ವಿಧದಲ್ಲಿಯೂ ಗೋಚರಿಸದವನು. ಆದ್ದರಿಂದ ಆತನನ್ನು ಅವ್ಯಕ್ತ ಎಂದಿದ್ದಾರೆ. ಈ ಪದವೂ ಸಹ ಆತನ ಒಂದು ಪದ್ಧತಿಯನ್ನು ತಿಳಿಸುವುದೇ ಹೊರತು ನಿರ್ದಿಷ್ಟವಾದ ಹೆಸರೂ ಅಲ್ಲ.

ಎಲ್ಲರ ಮೇಲೂ ಆದಿಪತ್ಯ ಹೊಂದಿರುವವನನ್ನು ರಾಜ ಎನ್ನುತ್ತಾರೆ. ಎಲ್ಲರಿಗಿಂತಲೂ ಎಲ್ಲವುಗಳಲ್ಲಿ ದೊಡ್ಡವನನ್ನು ರಾಜ ಎಂದು ಹೇಳುವುದು ಬಳಿಕೆಯಲ್ಲಿದೆ. ಸ್ವಲ್ಪ ರಾಜ್ಯದ ಮೇಲೆ ಅಧಿಕಾರ ಹೊಂದಿ ತಾನು ಏನೆಂದು ಕೊಂಡರೆ ಅದನ್ನು ಜಾರಿಗೆ ಮಾಡಲು ಸ್ವಂತ ಅಧಿಕಾರವಿರುವವನೇ ರಾಜ. ತನ್ನ ರಾಜ್ಯದಲ್ಲಿರುವ ಅವರೆಲ್ಲರಲ್ಲಿಯೂ ದೊಡ್ಡತನ ಹೊಂದಿ ಎಲ್ಲರ ಮೇಲೂ ಅಧಿಕಾರ ಹೊಂದಿ, ಎಲ್ಲರನ್ನೂ ಶಾಸಿಸಿ ತನ್ನ ಅನುಚರರಿಂದ ನಡೆಸುವವನು ರಾಜ. ಪರಮಾತ್ಮನಿಗೆ ವಿಶ್ವವೇ ರಾಜ್ಯವಾಗಿದೆ. ಆತನು ಎಲ್ಲಾ ಕಡೆಯೂ ವ್ಯಾಪಿಸಿಕೊಂಡು ಎಲ್ಲದರ ಮೇಲೂ ಅಧಿಕಾರ ಹೊದಿಂದ್ದಾನೆ. ಪರಮಾತ್ಮ ಪ್ರತಿ ಮನುಷ್ಯ, ಪ್ರತಿ ಜೀವರಾಶಿಯ ಮೇಲೆ ತನ್ನ ಪ್ರಕೃತಿಯ ಮೂಲಕ ಅಧಿಕಾರ ಹೊಂದಿದ್ದು ಜಾದೂಗಾರನು ಬೊಂಬೆಗಳನ್ನಾಡಿಸುವ ರೀತಿಯಲ್ಲಿ ಎಲ್ಲರನ್ನು ಆಡಿಸುತ್ತಿದ್ದಾನೆ. ಪ್ರಪಂಚದಲ್ಲಿ ಆತನಿಗಿಂತ ದೊಡ್ಡವನಾಗಲಿ ಆತನ ಆಜ್ಞೆಯನ್ನು ಅತಿಕ್ರಮಿಸುವುದಾಗಲಿ ಏನೂ ಇಲ್ಲ, ಆದ್ದರಿಂದ ಆತನು ಎಲ್ಲರಿಗೂ ರಾಜ. ರಾಜ ಎಂಬ ಪದ ಆತನ ಅಧಿಕಾರವನ್ನು ತಿಳಿಸುವ ಪದವೇ ಹೊರತು ಹೆಸರು ಅಲ್ಲ.

ಎಲ್ಲಕ್ಕಿಂತಲೂ ದೊಡ್ಡದು ಪರಮಾತ್ಮ. ಪರಮಾತ್ಮನನ್ನು ಮೀರಿರುವುದು ಸರ್ವ ಜಗತ್ತಿನಲ್ಲಿಯೂ ಯಾವತ್ ಪ್ರಪಂಚದಲ್ಲಿಯೂ ಯಾವುದೇ ಆಗಲಿ ಯಾರೇ ಆಗಲಿ ಇಲ್ಲ. ಆದ್ದರಿಂದ ಎಲ್ಲಕ್ಕಿಂತ ದೊಡ್ಡವನಾದ ಪರಮಾತ್ಮನನ್ನು ದೊಡ್ಡವ ಎಂಬ ಪದದಿಂದ ಕರೆಯುತ್ತಿದ್ದರು. ಆ ಭಾವನೆಯಿಂದಲೇ ಮೂವರನ್ನು ಹೆತ್ತ ಅಮ್ಮನ ಮೂಲ ದೊಡ್ಡಮ್ಮ ಎಂದಿದ್ದಾರೆ. ಪ್ರಕೃತಿಗೆ ಮೂರು ಗುಣಗಳನ್ನು ಸೃಷ್ಠಿಸಿದವನು ಪರಮಾತ್ಮ ಆದ್ದರಿಂದ ಮೂವರನ್ನು ಹೆತ್ತವಳು ಎಂದಿದ್ದಾರೆ. ಎಲ್ಲದಕ್ಕೂ ಮೂಲವಾದುದು ಆಧಾರವಾಗಿರುವುದು ಆದ್ದರಿಂದ ಮೂಲ ಎಂದಿದ್ದಾರೆ. ಎಲ್ಲಕ್ಕಿಂತಲೂ ದೊಡ್ಡವನಾದ ಪರಮಾತ್ಮ ಹೆಂಗಸೋ ಗಂಡಸೋ ಯಾರಿಗೂ ತಿಳಿದಿಲ್ಲ ಆದ್ದರಿಂದ ಪರಮಾತ್ಮನನ್ನು ಒಂದು ಕಡೆ ಅವಳು ಎಂದು ಮತ್ತೊಂದು ಕಡೆ ಆತನು ಎಂದು ನುಡಿಯುತ್ತಿದ್ದೇವೆ. ಎಲ್ಲರನ್ನೂ ಹುಟ್ಟಿಸಿದವಳು ಎಂದು ಕೆಲವರು ಅಮ್ಮ ಎಂದಿದ್ದಾರೆ. ಎಲ್ಲರಿಗೂ ದೊಡ್ಡ ವಳಾಗಿರುವುದರಿಂದ ದೊಡ್ಡಮ್ಮ ಎಂದಿದ್ದಾರೆ. ಹಾಗೆಂದು ಹೆಂಗಸಾಗಿ ಹೋಲಿಸಿಕೊಳ್ಳುತ್ತಾರೇನೋ ಎಂದು ಪರಮಾತ್ಮ ಹೆಂಗಸಲ್ಲ ಗಂಡಸು ಎಂದು ತಿಳಿಸುವುದಕ್ಕಾಗಿ ದೊಡ್ಡಮ್ಮನಿಗೆ ಮೀಸೆಗಳನ್ನಿಟ್ಟಿದ್ದಾರೆ. ಈಗಲೂ ಎಲ್ಲಿಯಾದರೂ ದೊಡ್ಡಮ್ಮನ ಗುಡಿಗಳಲ್ಲಿ ಪ್ರತಿಮೆಗೆ ಮೀಸೆಗಳನ್ನಿಡುವ ಸಂಪ್ರದಾಯವಿದೆ. ಕರೆಯುವುದು ದೊಡ್ಡಮ್ಮನೆಂದು ಕಾಣಿಸುವುದು ಮೂತಿ ಮೇಲೆ ಮೀಸೆಯ ಗುರುತುಗಳು. ಇದರಿಂದ ಪರಮಾತ್ಮ ಹೆಂಗಸೋ ಗಂಡಸೋ ಯಾರಿಗೂ ಅರ್ಥವಾಗುವುದಿಲ್ಲ. ಹಾಗೆ ಯಾವುದೂ ಅಲ್ಲ ಎಂಬ ವಿಷಯ ತಿಳಿಸುವುದಕ್ಕೆ ಪೂರ್ವಿಕರು ಕೋರೆಗಳು, ಮೀಸೆಗಳು ಇಟ್ಟಿದ್ದಾರೆ. ಗಂಡು ಜಾತಿ ಪ್ರಾಣಿಗಳಿಗೆ ಕೋರೆಗಳಿರುವುದರಿಂದ ಗಂಡುಜಾತಿಯನ್ನು ತಿಳಿಸುವ ಕೋರೆಗಳು ಮೀಸೆಗಳನ್ನು ಇಟ್ಟು ದೊಡ್ಡಮ್ಮ ಎಂದು ಕರೆದಿದ್ದಾರೆ. ಇದರಿಂದ ಹೆಂಗಸೋ ಗಂಡಸೋ ಯಾವುದು ಅಲ್ಲವೆಂದು ಯಾವುದು ಅಲ್ಲದವನೇ ಪರಮಾತ್ಮನೆಂದು ತಿಳಿಯುತ್ತಿದೆ. ಹಿಂದೆ ಜ್ಞಾನ ತಿಳಿದಿದ್ದ ಹಿರಿಯರು ತಮ್ಮ ಜ್ಞಾನವನ್ನು ಇತರರಿಗೆ ತಿಳಿಸಲು ದೊಡ್ಡವ ಎಂಬ ಹೆಸರು ಮುಖ್ಯವಾಗಿ ಇರಿಸಿ, ಅಯ್ಯನೋ ಅಪ್ಪನೋ ಅರ್ಥವಾಗದಂತೆ ತಾಯಿ ತಂದೆ ಎಲ್ಲಾ ಆತನೇ ಎನ್ನುವಂತೆ ಗುರುತಿಗೆ

ದೊಡ್ಡಮ್ಮನನ್ನು ಇಟ್ಟಿದ್ದಾರೆ. ಈದಿನ ಆ ಭಾವನೆ ಸ್ವಲ್ಪವಾದರೂ ಇಲ್ಲದಂತೆ ಹೋಗಿರುವುದೇ ಅಲ್ಲದೆ ದೊಡ್ಡಮ್ಮನಿಗೂ ಸಹ ಆರು ಮಂದಿ ತಂಗಿಯರನ್ನು ಮತ್ತು ಒಬ್ಬ ತಮ್ಮನನ್ನು ಸೃಷ್ಟಿಸಿ ಕಥೆ ಎಣೆದು ಸಾಧಾರಣ ದೇವತೆಯ ಕೆಳಗೆ, ಕ್ಷುದ್ರ ದೇವತೆಯ ರೀತಿಯಲ್ಲಿ ಜಮಕಟ್ಟಿದ್ದಾರೆ. ಅಕ್ಕನಿಗಿವೆ ಆದ್ದರಿಂದ ತಂಗಿಯರಿಗೂ ಸಹ ಇರಬೇಕೆಂದು ಸುಂಕುಲಮ್ಮ, ಮಾರೆಮ್ಮ, ಪೋಲೇರಮ್ಮ, ಮಾಚಮ್ಮ, ಪೋಚಮ್ಮ, ಮೈಸಮ್ಮ ಎಂಬುವವರಿಗೆ ಕೆಲವು ಕಡೆ ಬೆಳ್ಳಿಯ ಮೀಸೆಗಳು, ಕೋರೆಗಳು ಇಡುವುದು ಸಹ ಇರುವ ವಿಷಯವೇ ಆಗಿದೆ. ಇವರೆಲ್ಲರೂ ಗ್ರಾಮದೇವತೆಗಳಾದರೆ ಇವರೊಂದಿಗೆ ದೊಡ್ಡಮ್ಮನನ್ನು ಬೆರೆಸಿರುವುದು ತಪ್ಪು. ಏಳು ಮಂದಿ ಅಕ್ಕ ತಂಗಿಯರಿರುವುದು ನಿಜವೇ ಆದರೆ ದೊಡ್ಡಮ್ಮ ಇವರೊಳಗಿನವಳಲ್ಲ. ಎಲ್ಲಮ್ಮ ಎಂಬ ಗ್ರಾಮದೇವತೆಯನ್ನು ಸೇರಿಸಿಕೊಂಡರೆ 1) ಸುಂಕುಲಮ್ಮ, 2) ಮಾರೆಮ್ಮ, 3) ಎಲ್ಲಮ್ಮ, 4) ಪೋಲೇರಮ್ಮ, 5) ಮಾಚಮ್ಮ, 6) ಪೋಚಮ್ಮ, 7) ಮೈಸಮ್ಮ ಇವರೆಲ್ಲರವು ವಾಸ್ತವವಾಗಿರುವ ಹೆಸರುಗಳಾದರೆ ದೊಡ್ಡಮ್ಮ ಎಂಬ ಪದವು ಹೆಸರು ಅಲ್ಲವೆಂದು ತಿಳಿಯಬೇಕು. ಎಲ್ಲರ ಮೇಲೆ ದೊಡ್ಡಸ್ತಿಕೆಯನ್ನು ತಿಳಿಸುವ ಪರಮಾತ್ಮ ಗುರುತಾಗಿರುವುದೆಂದು ಅರ್ಥವಾಗುತ್ತದೆ. ಪರಮಾತ್ಮ ಹೆಂಗಸು ಗಂಡಸಿಗೆ ಅತೀತನಾಗಿರುವುದರಿಂದ ದೊಡ್ಡಮ್ಮನಿಗೆ ಕೋರೆಗಳು, ಮೀಸೆಗಳನ್ನಿರಿಸಿದ್ದಾರೆ. ಎಲ್ಲಾ ವಿಧಗಳಲ್ಲಿಯೂ ಪರಮಾತ್ಮನಿಗೆ ದೊಡ್ಡವ ಎಂಬ ಪದ ಸರಿ ಹೋಗುತ್ತದೆಂದು ಪುರುಷೋತ್ತಮ ಎಂಬ ಪದದಲ್ಲಿ ಉತ್ತಮ ಎಂಬ ಪದವು ವಿಶೇಷಾರ್ಥವನ್ನು ತಿಳಿಸುವಂತೆ, ದೊಡ್ಡಮ್ಮ, ದೊಡ್ಡಣ್ಣ ಎಂಬ ಪದದಲ್ಲಿ ದೊಡ್ಡ ಎಂಬ ಪದವು ವಿಶೇಷಾರ್ಥವನ್ನು ತಿಳಿಸುತ್ತಿದೆ. ಆದ್ದರಿಂದ ಎಲ್ಲ ಲೋಕಗಳಿಗೂ ತಂದೆ ತಾಯಿ ಎರಡು ತಾನೇ ಆಗಿರುವ ಪರಮಾತ್ಮನಿಗೆ ದೊಡ್ಡವ ಎಂಬ ಪದ ಸರಿ ಹೋಗುತ್ತದೆಂದು ಹೇಳಬಹುದು. ತಾಯಿ ತಂದೆ ಎಲ್ಲ ಆತನೇ ಎಂದು ತಿಳಿಸು ನಿಮಿತ್ತ ದೊಡ್ಡ ಎಂಬ ಪದಕ್ಕೆ ಅಮ್ಮ ಎಂದು ಜೋಡಿಸಿ ದೊಡ್ಡಮ್ಮ ಎಂದು ತಾಯಿಯನ್ನು ಸೂಚಿಸುತ್ತ, ಮೀಸೆಗಳನ್ನಿಟ್ಟು ತಂದೆಯನ್ನು ಸೂಚಿಸುತ್ತ ದೊಡ್ಡಮ್ಮ ಎಂಬ ಬೊಂಬೆಯನ್ನು ತೋರಿಸಿದ್ದಾರೆ. ದೊಡ್ಡಮ್ಮನಿಗೆ ಮೀಸೆಗಳನ್ನು ಇರಿಸಬಹುದು

ಆದರೆ, ಸುಂಕುಲಮ್ಮ ಮೊದಲಾದ ಗ್ರಾಮ ದೇವತೆಗಳಿಗೆ ಮೀಸೆಗಳನ್ನಿಡಬಾರದು. ಪ್ರಾಂತ್ಯಗಳನ್ನು ಅನುಸರಿಸಿ ಉಳಿದ ದೇವತೆಗಳಿಗೆ ಹೆಸರುಗಳು ಬದಲಾಗುತ್ತಿರ ಬಹುದು ಆದರೆ ದೊಡ್ಡಮ್ಮ ಎಂಬುದು ಹೆಸರು ಅಲ್ಲ. ಆದ್ದರಿಂದ ದೊಡ್ಡಮ್ಮ ಎನ್ನುವುದು ಬದಲಾಗದೆ ಎಲ್ಲಿಯಾದರೂ ದೊಡ್ಡಮ್ಮನಾಗಿಯೇ ಇದೆ. ಪ್ರಸ್ತುತ ಕಾಲದಲ್ಲಿ ಮೀಸೆಗಳಿಲ್ಲದ ದೊಡ್ಡಮ್ಮನ ಆಲಯಗಳನ್ನು ಸಹ ತಯಾರು ಮಾಡಿದ್ದಾರೆ. ಇದು ಸಂಪ್ರದಾಯ ವಿರುದ್ಧ, ಮತ್ತು ಅರ್ಥ ರಹಿತವಾಗುತ್ತದೆ.

ಈ ವಿಧವಾಗಿ ಹೆಣ್ಣು ದೇವತೆಯ ಹೆಸರಿನಿಂದ ಮೊದಲು ದೇವಾಲಯಗಳಾಗಿದ್ದರೆ, ಕಾಲ ಕ್ರಮದಲ್ಲಿ ಎಷ್ಟೋ ಹೆಣ್ಣು ದೇವತೆಗಳನ್ನು ಮನುಷ್ಯರು ತಯಾರು ಮಾಡಿದ್ದಾರೆ. ಮೊದಲು ತಯಾರಾದವುಗಳು ಅರ್ಥದಿಂದ ಕೂಡಿಕೊಂಡಿವೆ. ಮುಖ್ಯವಾಗಿ ಈಶ್ವರಾಲಯ, ನಂತರ ರಂಗನ ಆಲಯ, ಆ ನಂತರ ದೊಡ್ಡಮ್ಮನ ಆಲಯಗಳು ಮೂರೇ ಆದರೆ ಇಂದಿಗೆ ಕೆಲವು ನೂರಾರು ದೇವಾಲಯಗಳು ಅರ್ಥ ರಹಿತವಾಗಿ ತಯಾರಾಗಿವೆ. ಹಾಗೆ ತಯಾರಾಗಿರುವ ಆಲಯಗಳಿಗೆ ಮನುಷ್ಯರೇ ಪುರಾಣಗಳನ್ನು ಬರೆದುಕೊಂಡಿದ್ದಾರೆ. ಯಾವುದೋ ಒಂದು ಕಟ್ಟು ಕಥೆ ಬರೆದು ಇದು ಇಂತಹ ಪುರಾಣ ಅಂತರ್ಗತವೆಂದು ಅಷ್ಟಾದಶ ಪುರಾಣಗಳಲ್ಲಿ ಯಾವುದೋ ಒಂದು ಪುರಾಣಕ್ಕೆ ಅನುಸಂಧಾನ ಮಾಡಿದ್ದಾರೆ. ಹೀಗೆ ಕೆಲವರು ಕಟ್ಟು ಕಥೆಗಳ ಪುರಾಣಗಳನ್ನು ಹೇಳುವುದರಿಂದ, ಮತ್ತೆ ಕೆಲವರು ಯಾವುದೋ ಒಂದು ಬರೆದು ಶಾಸ್ತ್ರವೆಂದು ಹೆಸರಿಡುವುದರಿಂದ ದೇವಾಲಯಗಳಲ್ಲಿ ಪೂರ್ವದ ಉದ್ದೇಶಗಳು ಹೋಗಿವೆ. ಭಕ್ತರಲ್ಲಿಯೂ ಸಹ ಪೂರ್ವದ ಭಾವನೆ ಹೋಗಿ ದೇವರು ಮುಕ್ತಿಗಾಗಿ ಅಲ್ಲ, ಕೋರಿಕೆಗಳನ್ನು ತೀರಿಸುವುದಕ್ಕಾಗಿ ಎಂದು ತಿಳಿಯುತ್ತಿದ್ದಾರೆ. ದೇವಾಲಯಗಳು ದೈವಜ್ಞಾನವನ್ನು ತಿಳಿಸುವಂತಹವುಗಳೆಂದು ತಿಳಿದುಕೊಳ್ಳದೇ ಹೋಗಿದ್ದಾರೆ. ಅಂದು ತ್ರೇತಾಯುಗ ದಲ್ಲಿ ರಾಮನ ಗುಡಿಯಲ್ಲಿ ಪ್ರಾರಂಭವಾದ ಆಲಯಗಳು ನಂತರ ಆಂಜನೇಯ ನದು, ಆ ನಂತರ ನರಸಿಂಹ ಸ್ವಾಮಿಯದು, ವಿಘ್ನೇಶ್ವರನದು ಹೀಗೆ ಹೊಸದಾಗಿ ಸಾಯಿ ಬಾಬಾ, ಅಯ್ಯಪ್ಪ ಸ್ವಾಮಿಯವರೆಗೂ ತಯಾರಾಗಿವೆ. ಭವಿಷ್ಯತ್ತಿನಲ್ಲಿ ಇನ್ನೂ ಎಷ್ಟು ತಯಾರಾಗಬಲ್ಲವೋ?

ದೇವಾಲಯಗಳು ಕೆಲವು ಮುಖ್ಯವಾದ ಪ್ರದೇಶಗಳಲ್ಲಿ ಮಾತ್ರ ಇರುತ್ತಿದ್ದವು. ಹಿಂದೆ ಮುಖ್ಯಕ್ಷೇತ್ರಗಳಾಗಿ ಕರೆಯಲ್ಪಡುತ್ತಿದ್ದ ಕೆಲವು ಜಾಗಗಳಲ್ಲಿ ಮಾತ್ರವೇ ಇರುತ್ತಿದ್ದವು. ತ್ರೇತಾಯುಗದಲ್ಲಿ ರಾಮನ ನಂತರ ಆರ್ಯರ ಪ್ರಭಾವದಿಂದ ಎಲ್ಲಾ ಗ್ರಾಮಗಳಲ್ಲಿಯೂ ರಾಮನ ದೇವಾಲಯಗಳು ನಿರ್ಮಿಸಿದ್ದಾರೆ. ತ್ರೇತಾಯುಗಕ್ಕಿಂತಲೂ ಮುಂಚೆ ಕೃತಯುಗದಲ್ಲಿ ಈಶ್ವರಾಲಯ ಗಳು, ರಂಗನ ಆಲಯಗಳು ಮೂಲದ ಅಮ್ಮ ಆದ ದೊಡ್ಡಮ್ಮನ ಆಲಯಗಳು ಬಹುದೂರ ಪ್ರಾಂತಗಳಲ್ಲಿ ಕಾಣಿಸುತ್ತಿದ್ದವು. ಹಿಮಾಚಲದಿಂದ ಹಿಡಿದು ಕನ್ಯಾಕುಮಾರಿಯುವರೆಗೂ ಐದಾರು ಈಶ್ವರಾಲಯಗಳಿಗಿಂತ ಹೆಚ್ಚಾಗಿ ಇರುತ್ತಿರಲಿಲ್ಲ. ಅಷ್ಟೇ ಸಂಖ್ಯೆಯಲ್ಲಿ ರಂಗನ ಆಲಯಗಳು ಇರುತ್ತಿದ್ದವು. ಐದಾರಕ್ಕಿಂತ ಮೀರಿ ದೊಡ್ಡಮ್ಮನ ಆಲಯಗಳು ಸಹ ಇರುತ್ತಿರಲಿಲ್ಲ. ಎಲ್ಲಿ ಯಾವ ಆಲಯವಿದ್ದರೂ ಅದು ಊರ ಹೊರಗೆ ದೂರವಾಗಿ ಬೆಟ್ಟಗಳ ಮೇಲೋ, ಅಡವಿ ಪ್ರಾಂತದಲ್ಲಿಯೋ, ಸಮುದ್ರದ ಪಕ್ಕದಲ್ಲಿಯೋ, ನದಿಗಳ ಹತ್ತಿರವೋ ಇರುತ್ತಿತ್ತು.

ಊರಿನಲ್ಲಿ ಯಾವ ಆಲಯವು ಇರುತ್ತಿರಲಿಲ್ಲ. ಪ್ರತಿ ಸಣ್ಣ ಊರಿನಲ್ಲಿಯೂ ಸಹ ಊರಿಗೆ ಮಧ್ಯದಲ್ಲಿ "ನಾಭಿಕಲ್ಲು" (ಬುಡ್ಡೆಕಲ್ಲು) ಎಂಬ ಹೆಸರಿನಿಂದ ಒಂದು ಗುಂಡು ಇರುತ್ತಿತ್ತು. ಅಂದಿನ ಪ್ರಜೆಗಳಿಗೆ ಅದರ ವಿವರವೇನೋ ತಿಳಿದಿರುತ್ತಿತ್ತು. ಇಂದಿಗೂ ನಮಗೆ ತಿಳಿಯದೇ ಹೋಗಿದೆ. ಆದ್ದರಿಂದ ಅದನ್ನು ಕುರಿತು ತಿಳಿದುಕೊಳ್ಳೋಣ. ಪೂರ್ವಕಾಲದಲ್ಲಿ ಒಂದು ಊರನ್ನು ನಿರ್ಮಿಸುವಾಗ ಮೊದಲು ಒಂದು ನಾಭಿಕಲ್ಲನ್ನು ಹೂತಿಟ್ಟು ಅದರ ಸುತ್ತಲೂ ಊರನ್ನು ನಿರ್ಮಾಣ ಮಾಡಿಕೊಳ್ಳುತ್ತಿದ್ದರು. ಯಾವ ಕಡೆ ನೋಡಿದರೂ ಊರಿಗೆ ಮಧ್ಯೆ ಇರುವಂತೆ ನಾಭಿಕಲ್ಲನ್ನು ಇರಿಸುತ್ತಿದ್ದರು. ಹಾಗೆ ಇರಿಸುವುದರಲ್ಲಿ ಪೂರ್ವಿಕರ ಉದ್ದೇಶ ಈ ವಿಧವಾಗಿರುತ್ತಿತ್ತು. ಸರ್ವಪ್ರಪಂಚಕ್ಕೂ ಮೂಲವಾದವನು ಮತ್ತು ಆಧಾರವಾಗಿರುವವನು ಪರಮಾತ್ಮನೆಂದು ಪರಮಾತ್ಮನನ್ನು ಆಧಾರ ಮಾಡಿಕೊಂಡು ಪ್ರಕೃತಿ ಪರಿಭ್ರಮಿಸುತ್ತಿದೆ ಎಂದು

ಅವರ ಉದ್ದೇಶ. ಆ ಉದ್ದೇಶದ ಪ್ರಕಾರವೇ ನಾಭಿಕಲ್ಲನ್ನು ಮಧ್ಯದಲ್ಲಿ ಇರಿಸಿ ಅದನ್ನು ಪರಮಾತ್ಮನೆಂದು ಭಾವಿಸಿ ಊರನ್ನು ಪ್ರಪಂಚವಾಗಿ ಭಾವಿಸಿ ಕಟ್ಟುತ್ತಿದ್ದರು. ಮನುಷ್ಯನಿಗೆ ಮಧ್ಯದಲ್ಲಿ ನಾಭಿ ಇದೆ. ನಾಭಿ ಆಧಾರದಿಂದಲೇ ತಾಯಿಯ ಉದರದಲ್ಲಿ ಶಿಶು ಬೆಳೆಯುವುದು ನಡೆಯುತ್ತಿದೆ. ಶರೀರ ಮೊದಲು ತಯಾರಾಗಲು ನಾಭಿಯೇ ಮೂಲಾಧಾರ. ಪ್ರಪಂಚಕ್ಕೆ ಮೂಲಾಧಾರ ಪರಮಾತ್ಮನೇ. ಆದ್ದರಿಂದ ಊರಿನ ಮಧ್ಯದಲ್ಲಿ ಹೂತಿಟ್ಟು ಕಲ್ಲಿಗೆ ನಾಭಿಕಲ್ಲು ಎಂದು ಹೆಸರಿಡುವುದು ನಡೆದಿದೆ. ನಾಭಿಕಲ್ಲು ಭೂಮಿಯೊಳಗೆ ಅರ್ಧ ಹೂತಿಟ್ಟು ಅರ್ಧ ಮೇಲೆ ಕಾಣಿಸುವಂತೆ ಇಟ್ಟಿರುತ್ತಾರೆ. ನಾಭಿಕಲ್ಲು ಈಶ್ವರಲಿಂಗದ ಒಂದು ಆಕಾರ ಹೊಂದಿರುತ್ತದೆ. ಗುಡಿಯಲ್ಲಿನ ಈಶ್ವರ ಲಿಂಗವು ಪಾಣಿಮಟ್ಟದಿಂದಲೂ ಸಹ ಇರುತ್ತದೆ. ಮಧ್ಯ (ನಡು) ಊರಿನಲ್ಲಿರುವ ನಾಭಿಕಲ್ಲು ಪಾಣಿಮಟ್ಟವಿಲ್ಲದ ಈಶ್ವರ ಲಿಂಗವಾಗಿ ಕಾಣಿಸುತ್ತದೆ. ಪಾಣಿಮಟ್ಟ ಇಲ್ಲದಿರುವುದರಿಂದ ಭೂಮಿ ಯೊಳಗೆ ಹೂತಿಟ್ಟಿರುವ ದುಂಡನೆಯ ಕಲ್ಲಿನ ಹಾಗೆ ಕಾಣಿಸುತ್ತಿರುತ್ತದೆ. ನಾಭಿಕಲ್ಲು ಪ್ರಪಂಚಕ್ಕೆ ಆಧಾರವಾಗಿರುವ ಪರಮಾತ್ಮನನ್ನು ತಿಳಿಸುವ ಗುರುತಾಗಿದೆ. ಆದ್ದರಿಂದ ಅದನ್ನು ಪುರುಷನೆಂದು ತಿಳಿಯುವಂತೆ ಹೋತಯ್ಯ ಎಂದು ಹೇಳುವುದು ಸಹ ನಡೆದಿದೆ ಹೋತಯ್ಯ ಎಂದರೆ ಪುರುಷೋತ್ತಮನೆಂದು ಅರ್ಥ. ಸರ್ವ ಪ್ರಪಂಚಕ್ಕೂ ಸೃಷ್ಟಿಕರ್ತನಾದ್ದರಿಂದ ಊರಿಗಿಂತಲೂ ಮುಂಚೆಯೇ ನಾಭಿಕಲ್ಲನಿಟ್ಟು ನಂತರ ಊರನ್ನು ನಿರ್ಮಿಸುತ್ತಿದ್ದರು. ಊರಿಗೆ ಆಧಾರವಾಗಿರು ವುದು, ಊರಿಗೆ ಮೂಲವೂ ಮತ್ತು ನಾಭಿಯಂತಹದ್ದು ಆದ್ದರಿಂದ ಅದನ್ನು ನಾಭಿಕಲ್ಲು ಎನ್ನುವುದು ನಡೆದಿದೆ. ಊರೆಲ್ಲವೂ ಪ್ರಪಂಚವೆಂದು ಮಧ್ಯದಲ್ಲಿರುವ ಕಲ್ಲು ಪುರುಷನಾದ ಪರಮಾತ್ಮನೆಂದು ತಿಳಿಯುವಂತೆ ಮತ್ತು ಪುರುಷೋತ್ತಮನೆಂದು ತಿಳಿಯುವಂತೆ ನಾಭಿಕಲ್ಲನ್ನು ಹೋತಯ್ಯ ಎನ್ನುವುದೂ ಸಹ ನಡೆದಿದೆ. ಆದ್ದರಿಂದ ನಾಭಿಕಲ್ಲಿನಲ್ಲಿ ಹೋತಯ್ಯ ನಾದ ಪರಮಾತ್ಮನ ಭಾವನೆ ಕಾಣಿಸುತ್ತಿದೆ ಎಂದು ಹೇಳಬಹುದು.

# 5. ಏಳು ದ್ವಾರಗಳು



ದೇವಾಲಯಗಳಲ್ಲಿ ಏಳು ದ್ವಾರಗಳಿಗೆ ಎಷ್ಟೋ ವಿಶಿಷ್ಟತೆ ಇದೆ. ಆಲಯದ ಮುಂದೆಯೇ ದೊಡ್ಡದಾದ ಎತ್ತರವಾದ ಗೋಪುರವಿರುತ್ತದೆ, ಆ ಗೋಪುರದ ಮೇಲೆ ಕೆಳಗಿನಿಂದ ಮೇಲಿನವರೆಗೂ ಏಳು ದ್ವಾರಗಳನ್ನು ನಿರ್ಮಿಸಿರುತ್ತಾರೆ. ಹಾಗೆಯೇ ಗೋಪುರ ದಾಟಿ ಒಳಗೆ ಹೋದ ನಂತರ ಗರ್ಭಗುಡಿಯಲ್ಲಿನ ಪ್ರತಿಮೆಯವರೆಗೂ ಏಳು ದ್ವಾರಗಳನ್ನು ದಾಟ ಬೇಕಾಗಿರುತ್ತದೆ. ಮೊದಲೇ ಇರುವ ಗೋಪುರವು ಏಳು ದ್ವಾರಗಳಿಗೂ, ಹಾಗೆಯೇ ಗರ್ಭಗುಡಿ ಮುಂದಿರುವ ಏಳು ದ್ವಾರಗಳಿಗೂ ಇರುವ ಭಾವನೆಯೇನೋ, ಪೂರ್ವದಲ್ಲಿ ಹಿರಿಯರು ಯಾವ ಉದ್ದೇಶದಿಂದ ಗೋಪುರವನ್ನು ಮೇಲಕ್ಕೆ, ಗುಡಿ ಮುಂದೆ ಏಳು ದ್ವಾರಗಳನ್ನು ಇಟ್ಟಿದ್ದಾರೋ ತಿಳಿದುಕೊಳ್ಳೋಣ. ನಮ್ಮ ಶರೀರದಲ್ಲಿರುವ ಮೂರುವರೆ ಲಕ್ಷ ನಾಡಿಗಳಲ್ಲಿ ಎಪ್ಪತ್ತೆರಡು (72) ಸಾವಿರ ನಾಡಿಗಳು ಮುಖ್ಯವಾದವುಗಳಾಗಿ ಅದರಲ್ಲಿ ಹತ್ತು ಶಿರೋನಾಡಿಗಳು ಪ್ರಾಮುಖ್ಯತೆ ಹೊಂದಿದ್ದರೆ ಅವುಗಳಿಗಿಂತ ಮುಖ್ಯವಾದವುಗಳು ಮೂರು ಇವೆ. ಅವುಗಳ ಹೆಸರುಗಳೇ ಇಡ, ಪಿಂಗಳ, ಸುಷುಮ್ನ ನಾಡಿಗಳೆನ್ನುತ್ತಾರೆ. ಸೂರ್ಯ, ಚಂದ್ರ, ಬ್ರಹ್ಮ ನಾಡಿಗಳೆಂದೂ ಸಹ ಅವುಗಳಿಗೆ ಹೆಸರುಗಳಿವೆ. ಶರೀರದಲ್ಲಿನ ಹತ್ತು ಶಿರೋನರಗಳು ಈ ಮೂರು ನಾಡಿಗಳಿಂದಲೇ ಹೊರಟಿವೆ. ಮತ್ತು ಶರೀರದಲ್ಲಿನ ಪ್ರತಿ ಸಣ್ಣ ನಾಡಿಯು ಈ ಮೂರು ನಾಡಿಗಳೊಂದಿಗೆ ಅನುಸಂದಾನವಾಗಿವೆ. ಶರೀರದಲ್ಲಿರುವ ನಾಡಿ ವ್ಯವಸ್ಥೆಗೆಲ್ಲಾ ಸೂರ್ಯ ಚಂದ್ರ ಬ್ರಹ್ಮನಾಡಿಗಳೇ ಆಧಾರವಾಗಿವೆ. ಸೂರ್ಯ ಚಂದ್ರ ಬ್ರಹ್ಮನಾಡಿಗಳಲ್ಲಿ ಅತಿ ಮುಖ್ಯವಾದುದು ಬ್ರಹ್ಮನಾಡಿ. ಬ್ರಹ್ಮನಾಡಿಯಲ್ಲಿಯೇ ಶರೀರದಲ್ಲಿರುವ ಆತ್ಮ ನಿವಾಸ ಮಾಡುತ್ತಿದೆ. ಅಂದರೆ ಬ್ರಹ್ಮನಾಡಿಯನ್ನು ಆತ್ಮ ಆಧಾರ ಮಾಡಿಕೊಂಡು ಅಲ್ಲಿಂದ ಅನುಸಂಧಾನವಾದ ನಾಡಿಗಳ ಮೂಲಕ ಶರೀರವೆಲ್ಲ ವ್ಯಾಪಿಸುತ್ತದೆ. ಬ್ರಹ್ಮನಾಡಿಯಲ್ಲಿರುವ ಆತ್ಮ ನಾಡಿಗಳ ಮೂಲಕ ತನ್ನ ಶಕ್ತಿಯನ್ನು ಶರೀರವೆಲ್ಲ ವ್ಯಾಪಿಸುವಂತೆ ಮಾಡಿ ಶರೀರವನ್ನು ಕದಲಿಸುತ್ತಿದೆ. ಶರೀರದಲ್ಲಿರುವ ಜೋಡಿ ಆತ್ಮಗಳಾದ ಆತ್ಮ ಜೀವಾತ್ಮಗಳಲ್ಲಿ ಆತ್ಮ ಬ್ರಹ್ಮನಾಡಿಯಲ್ಲಿದೆ ಎಂದು ತಿಳಿಯುತ್ತಿದೆ.

ದೇಹವೇ ದೇವಾಲಯ, ಆತ್ಮವೇ ದೇವರು ಎಂಬ ಹಿರಿಯರ ವಾಕ್ಯದ ಪ್ರಕಾರ ಶರೀರದಲ್ಲಿನ ಬ್ರಹ್ಮನಾಡಿಯಲ್ಲಿರುವ ಆತ್ಮವೇ ದೇವರೆಂದು ತಿಳಿಯುತ್ತಿದೆ. ನಿನ್ನ ಶರೀರದಲ್ಲಿ ನೀನು ಜೀವಾತ್ಮನಾಗಿರುವಾಗ ನಿನ್ನ ಶರೀರದಲ್ಲಿನ ಆತ್ಮ ದೇವರಾಗಿದ್ದಾನೆ. ಜೀವೋ ದೇವೋ ಸನಾತನಃ ಎನ್ನುವ ಹಾಗೆ ಶರೀರದಲ್ಲಿ ಜೀವಾತ್ಮ ದೇವರು ಯಾವಾಗಲೂ ಇರುತ್ತಾರೆ. ದೇವ ದೇವನಾದ ಪರಮಾತ್ಮನು ಸಹ ಆತ್ಮಕ್ಕಿಂತಲೂ ಬೇರೆಯಾಗಿ ಶರೀರದಲ್ಲಿಯೇ ಇದ್ದಾನೆ. ಪರಮಾತ್ಮ ಶರೀರವನ್ನು ಬಿಟ್ಟು ಮುಕ್ತಿ ಹೊಂದಿದ ನಂತರ ತಿಳಿಯುತ್ತಾನೆ. ಮುಕ್ತಿ ಹೊಂದದ ಮೊದಲೇ ಆತ್ಮವನ್ನು ತಿಳಿಯಬಹುದು. ಆತ್ಮವನ್ನು ದರ್ಶಿಸುವುದನ್ನೇ ದೈವದರ್ಶನ ಎನ್ನುತ್ತಾರೆ. ದೈವ ದರ್ಶನಕ್ಕೆ ಸಂಬಂಧಿಸಿದ ಪರಿಜ್ಞಾನವನ್ನು ತಿಳಿಸುವುದೇ ದೇವಾಲಯ. ಆದ್ದರಿಂದ ದೇವಾಲಯದಲ್ಲಿನ ಏಳು ದ್ವಾರಗಳು ಶರೀರದಲ್ಲಿನ ದೈವ ದರ್ಶನ ನಿಮಿತ್ತ ಸಂದೇಶಾರ್ಥವಾಗಿ ನಿರ್ಮಿಸಲ್ಪಟ್ಟಿವೆ. ಸೂರ್ಯನು ಆಕಾಶದಲ್ಲಿದ್ದು ತನ್ನ ಕಿರಣಗಳಿಂದ ಪ್ರಪಂಚಕ್ಕೆಲ್ಲಾ ಬೆಳಕು ಕೊಡುವಂತೆ ಆತ್ಮ ಬ್ರಹ್ಮನಾಡಿಯಲ್ಲಿದ್ದು ಶರೀರಕ್ಕೆಲ್ಲ ಶಕ್ತಿ ಕೊಡುತ್ತಿದೆಯೆಂದು ಗೀತೆಯಲ್ಲಿ ಭಗವಂತನು ಸಹ ತಿಳಿಸಿದ್ದಾನೆ. ಶರೀರದಲ್ಲಿ ದೈವವಾಗಿ ಹೆಸರಾದ ಆತ್ಮ ಬ್ರಹ್ಮನಾಡಿಯಲ್ಲಿ ಇದೆಯೆಂದು ಹೇಳಿಕೊಂಡಿದ್ದೇವೆ. ಆಕಾಶದಲ್ಲಿ ಸೂರ್ಯನು ಎಲ್ಲಿದ್ದಾನೆಂದರೆ, ಇಂತಹ ರಾಶಿಯಲ್ಲಿ ಇದ್ದಾನೆಂದು ಹೇಳಿದಂತೆ, ಶರೀರದಲ್ಲಿ ಆತ್ಮ ಎಲ್ಲಿದ್ದಾನೆಂದು ಕೇಳಿದೊಡನೆ ಬ್ರಹ್ಮನಾಡಿಯಲ್ಲಿ ಇಂತಹ ಕಡೆ ಇದ್ದಾನೆಂದು ಹೇಳಬಹುದು. ಆಕಾಶದಲ್ಲಿ ಸೂರ್ಯನು 12 ರಾಶಿಗಳಲ್ಲಿ ಯಾವುದೋ ಒಂದು ರಾಶಿಯಲ್ಲಿರುತ್ತಾನೆ, ಹಾಗೆಯೇ ಶರೀರದಲ್ಲಿ ಆತ್ಮ ಎಲ್ಲಿದೆಯೆಂದು ಕೇಳಿದರೆ ಬ್ರಹ್ಮನಾಡಿಯಲ್ಲಿ ಇಂತಹ ಕಡೆ ಇದ್ದಾನೆ ಎಂದು ಹೇಳಬೇಕಾಗಿದೆ. ಹಾಗೆ ಹೇಳಬೇಕೆಂದರೆ ಮೊದಲು ಬ್ರಹ್ಮನಾಡಿಯನ್ನು ಕುರಿತು ಪೂರ್ತಿ ತಿಳಿದುಕೊಂಡಿ ರಬೇಕು. ಶರೀರದಲ್ಲಿ ಬ್ರಹ್ಮನಾಡಿ ಎನ್ನುವುದು ತಲೆಯಿಂದ ಹಿಡಿದು ಗುದ ಸ್ಥಾನದವರೆಗೂ ಇರುವ ಬೆನ್ನುಮೂಳೆಯ ಮಧ್ಯ ಭಾಗದಲ್ಲಿ ವ್ಯಾಪಿಸಿಕೊಂಡಿದೆ. ಬೆನ್ನು ಮೂಳೆಯಲ್ಲಿರುವ ನಾಡಿಯಾದ್ದರಿಂದ ಇದಕ್ಕೆ ಬೆನ್ನಿನ ಹಾವು ಎಂಬ ಹೆಸರು ಸಹ ಇದೆ. ಬೆನ್ನು ಹಾವು ಅಥವಾ ಬ್ರಹ್ಮನಾಡಿ ಏಳು ಭಾಗವಾಗಿ ವಿಭಜಿಸಲ್ಪಟ್ಟಿದೆ

ಎಂದು ಹೇಳಬಹುದು. ಒಂದೊಂದು ಭಾಗದಲ್ಲಿ ಒಂದೊಂದು ನಾಡೀ ಕೇಂದ್ರವಿರುತ್ತದೆ. ಅಂದರೆ ಬ್ರಹ್ಮನಾಡಿ ಒಂದೇಯಾಗಿದ್ದರೂ ಅದರಲ್ಲಿ ಏಳು ನಾಡೀಕೇಂದ್ರಗಳು ಇವೆ. ಅವುಗಳನ್ನೇ ಕೆಲವರು ಏಳು ಪದ್ಮಗಳಾಗಿ ಹೇಳಿಕೊಳ್ಳುತ್ತ ಒಂದೊಂದು ಪದ್ಮದ ಮೇಲೆ ಒಬ್ಬೊಬ್ಬ ದೇವರಿದ್ದಾನೆಂದು ಸಹ ಹೇಳಿ ಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಬ್ರಹ್ಮನಾಡಿಯಲ್ಲಿ ಏಳು ನಾಡೀಕೇಂದ್ರ ಗಳಿವೆ. ಆದರೆ ಅಲ್ಲಿ ಪದ್ಮಗಳೆನ್ನುವ ಹೂವುಗಳು ಇಲ್ಲ ಮತ್ತು ದೇವತೆಗಳು ಇಲ್ಲ. ಬ್ರಹ್ಮನಾಡಿಯಲ್ಲಿ ಆತ್ಮ ಶಿರಸ್ಸಿನಲ್ಲಿರುವ ಏಳನೆಯ ನಾಡೀ ಕೇಂದ್ರದಲ್ಲಿದ್ದು ಉಳಿದ ಆರು ಕೇಂದ್ರಗಳಲ್ಲಿಯೂ ಸಹ ತನ್ನ ಶಕ್ತಿಯನ್ನೇ ತುಂಬಿ ಒಟ್ಟು ಏಳು ಕೇಂದ್ರಗಳ ಮೂಲಕ ಶರೀರವನ್ನು ನಡೆಸುತ್ತಿದೆ. ಮುಖ್ಯವಾಗಿ ನಮ್ಮ ಶರೀರದಲ್ಲಿ ನಾವು ನಿವಾಸಿಸಲು ಆಡುತ್ತಿರುವ ಶ್ವಾಸವನ್ನು ಈ ಏಳು ನಾಡೀಭಾಗಗಳು ನಡೆಸುತ್ತಿವೆ. ಹುಟ್ಟಿದಂದಿನಿಂದ ಸತ್ತು ಹೋಗುವವರೆಗೂ ಜೀವಿಯ ಆಯಸ್ಸು, ಶ್ವಾಸಗಳ ರೂಪದಲ್ಲಿಯೇ ಇರುತ್ತದೆ. ಜನನದಿಂದ ಮರಣದವರೆಗೂ ಏಳು ಕೇಂದ್ರಗಳೇ ಒಂದರ ನಂತರ ಒಂದು ಶ್ವಾಸವನ್ನು ತಿರುಗಿಸುತ್ತಿವೆ. ಜೀವಿಯು ಶರೀರದಲ್ಲಿ ಇರಬೇಕೆಂದರೆ ಶ್ವಾಸ ಆಡಬೇಕು, ಶ್ವಾಸ ಆಡಬೇಕೆಂದರೆ 24 ಗಂಟೆಗಳು ಬ್ರಹ್ಮನಾಡಿಯಲ್ಲಿ ಕೇಂದ್ರಗಳು ಕೆಲಸ ಮಾಡಬೇಕು. ಆದ್ದರಿಂದ ಪ್ರತಿ ಜೀವರಾಶಿಗೂ ಶ್ವಾಸವನ್ನು ನಡೆಸುವವನು ಆ ಶರೀರದಲ್ಲಿನ ದೇವರೇ ಎಂದು ತಿಳಿಯಬೇಕು.

ಒಂದು ದಿನಕ್ಕೆ 21,600 ಶ್ವಾಸಗಳು ನಡೆಯಬೇಕಾಗಿರುವಾಗ ಆ ಶ್ವಾಸಗಳು ಈ ವಿಧವಾಗಿ ಈ ಏಳು ಕೇಂದ್ರಗಳ ಮೂಲಕ ನಡೆಯುತ್ತಿವೆ. ಕೆಳಗಿರುವ ನಾಡೀಕೇಂದ್ರವು ಶರೀರದಲ್ಲಿ ಗುದ ಸ್ಥಾನಕ್ಕೆ ಸಮಾನವಾಗಿ ಬೆನ್ನು ಮೂಳೆಯಲ್ಲಿನ ಬ್ರಹ್ಮ ನಾಡಿಯಲ್ಲಿದೆ. ಆ ನಾಡೀ ಕೇಂದ್ರಕ್ಕೆ (1) ಆಧಾರವೆಂದು ಹೆಸರಿಟ್ಟಿದ್ದಾರೆ. ಆಧಾರ ನಾಡೀಕೇಂದ್ರದ ಮೂಲಕ 600 ಶ್ವಾಸಗಳು ಆಡುತ್ತಿವೆ. ಆಧಾರ ನಾಡೀಕೇಂದ್ರದಿಂದ ಕೆಲವು ನರಗಳು ಹೊರಬಂದು ಶ್ವಾಸಕೋಶ ಗಳವರೆಗೂ ವ್ಯಾಪಿಸಿರುವುದರಿಂದ ಆತ್ಮ ತನ್ನ ಶಕ್ತಿಯಿಂದ ಶ್ವಾಸಕೋಶ ಗಳನ್ನು




**ಏಳು ದ್ವಾರಗಳು**

ಕದಲಿಸುತ್ತ ಉಚ್ವಾಸ ನಿಚ್ವಾಸಗಳನ್ನು ಉಂಟು ಮಾಡುತ್ತಿದೆ. ಹಾಗೆಯೇ ಲಿಂಗಸ್ಥಾನಕ್ಕೆ ಸರಿಯಾಗಿ ಮತ್ತೊಂದು ನಾಡೀ ಕೇಂದ್ರವಿದೆ. ಆ ನಾಡೀ ಕೇಂದ್ರಕ್ಕೆ (2) ಸ್ವಾದಿಷ್ಟಾನ ಎಂಬ ಹೆಸರನ್ನಿಟ್ಟಿದ್ದಾರೆ. ಸ್ವಾಧಿಷ್ಟಾನ ನಾಡೀ ಕೇಂದ್ರದ ಮೂಲಕ 6000 ಶ್ವಾಸಗಳು ಆಡುತ್ತಿವೆ. ನಂತರ ಕೇಂದ್ರವು ನಾಭಿಗೆ ಸಮತಲವಾಗಿದೆ. ಅದಕ್ಕೆ (3) ಮಣಿಪೂರಕವೆಂದು ಹೆಸರಿಟ್ಟಿದ್ದಾರೆ. ಈ ಕೇಂದ್ರದ ಮೂಲಕ 6000 ಶ್ವಾಸಗಳು ಆಡುತ್ತಿವೆ. ಹಾಗೆಯೇ ನಂತರ ಕೇಂದ್ರವು ಗುಂಡಿಗೆಗೆ ಸಮಾನವಾಗಿದೆ. ಅದಕ್ಕೆ (4) ಅನಾಹತವೆಂದು ಹೆಸರಿಟ್ಟಿದ್ದಾರೆ. ಅನಾಹತ ನಾಡೀಕೇಂದ್ರದ ಮೂಲಕ 6000 ಶ್ವಾಸಗಳು ಆಡುತ್ತಿವೆ. ಐದನೇ ಕೇಂದ್ರ ಕಂಠಕ್ಕೆ ಸಮಾನವಾಗಿದೆ, (5) ವಿಶುದ್ಧವೆಂದು 5ನೇ ಕೇಂದ್ರವನ್ನು ಕರೆಯುತ್ತಿದ್ದೇವೆ. ಈ ಕೇಂದ್ರದ ಮೂಲಕ 1000 ಶ್ವಾಸಗಳು ಆಡುತ್ತಿವೆ. ನಂತರ ಆರನೇ ಕೇಂದ್ರ (6) ಆಗ್ನೇಯ ಎಂದು ಕರೆಯಲ್ಪಡುತ್ತಿದೆ. ಇದರ ಮೂಲಕವೂ ಸಹ 1000 ಶ್ವಾಸಗಳು ಆಡುತ್ತಿವೆ. ಇನ್ನು ಎಲ್ಲಕ್ಕಿಂತಲೂ ಮುಖ್ಯವಾದುದು

ಏಳನೇ ಕೇಂದ್ರ ಈ 7ನೇ ಕೇಂದ್ರದಲ್ಲಿಯೇ ಆತ್ಮವು ನಿವಾಸವಾಗಿದೆ. ಈ ಕೇಂದ್ರದ ಒಂದು ಹೆಸರು ಸಹಸ್ರಾರ. ಸಹಸ್ರಾರದ ಮೂಲಕವೂ ಸಹ 1000 ಶ್ವಾಸಗಳು ಆಡುತ್ತಿವೆ. ತಲೆಯಲ್ಲಿನ ಮೆದುಳು ಭಾಗವನ್ನು ಏಳನೆಯ ಕೇಂದ್ರವೆಂದು ತಿಳಿಯಬೇಕು. ಪ್ರತಿದಿನವೂ 21,600 ಶ್ವಾಸಗಳನ್ನು ನಡೆಸುತ್ತ ಶರೀರಕ್ಕೆ ಶಕ್ತಿಕೊಟ್ಟು ನಿದ್ರೆಯಲ್ಲಿಯೂ ಎಚ್ಚರದಲ್ಲಿಯೂ ಅನೇಕ ಕೆಲಸಗಳನ್ನು ಮಾಡಿಸುತ್ತಿರುವುದು ಆತ್ಮವೆಂದೇ ತಿಳಿಯಬೇಕು. ಏಳು ನಾಡೀ ಕೇಂದ್ರಗಳ ಮೂಲಕವೇ ಕೆಲಸಗಳು, ಶ್ವಾಸಗಳು ನಡೆಯುತ್ತಿವೆಯೆಂದು ಅವುಗಳ ಮೂಲಕವೇ ಮನುಷ್ಯನ ಜೀವನದ ನಾಟಕ ಏರ್ಪಡುತ್ತಿದೆಯೆಂದು ತಿಳಿಸುವ ನಿಮಿತ್ತವೇ 7 ದ್ವಾರಗಳನ್ನು ದೇವಾಲಯಗಳ ಮೇಲೆ ತೋರಿಸಿದ್ದಾರೆ. ಶರೀರದ ಮೇಲೆ ಜ್ಞಾಪಕ ಬಿಟ್ಟಾಗ 7ನೇ ಕೇಂದ್ರದಲ್ಲಿ ಜ್ಞಾಪಕ ಇರಿಸಿದಾಗ ಅಲ್ಲಿರುವ ಆತ್ಮ ತಿಳಿಯುವುದೆಂದು ಮೇಲೆ 7 ನೇ ದ್ವಾರವನ್ನಿಟ್ಟಿದ್ದಾರೆ.

ಶರೀರ ದೇವಾಲಯವಾದರೆ ಆತ್ಮನೇ ದೇವರೆಂದಿದ್ದೇವೆ ಅಲ್ಲವೆ! ದೇವರಾಗಿರುವ ಆತ್ಮ ಶರೀರಕ್ಕೆ ಶಕ್ತಿ ಕೊಟ್ಟು ಕದಲಿಸುತ್ತ ಬಲಾ ಬಲದಿಂದ ಇರುವುದೇ ಅಲ್ಲದೆ ಆರೋಗ್ಯ, ಅನಾರೋಗ್ಯವನ್ನು ಸಹ ಉಂಟುಮಾಡುತ್ತಿದೆ. ಶರೀರಾಂತರ್ಗತ ಕಾರ್ಯಗಳನ್ನೆಷ್ಟೋ ಮಾಡುತ್ತ ಹೊರಗೆ ಕಾಣಿಸುವ ಬಲಾ ಬಲ, ಆರೋಗ್ಯ, ಅನಾರೋಗ್ಯಗಳನ್ನು ಕರ್ಮ ಪ್ರಕಾರ ಉಂಟುಮಾಡುತ್ತಿದೆ. ಬಲ, ಅಬಲಗಳು 7 ನಾಡೀ ಕೇಂದ್ರಗಳ ಮುಖಾಂತರ ಲಭ್ಯವಾಗುತ್ತಿರುವಾಗ ಆರೋಗ್ಯ, ಅನಾರೋಗ್ಯಗಳು ಶರೀರದಲ್ಲಿರುವ 7 ಗ್ರಂಥಿಗಳ ಮುಖಾಂತರ ಲಭಿಸುತ್ತಿವೆ. ಆತ್ಮ ಬ್ರಹ್ಮನಾಡಿಯಲ್ಲಿ ಏಳನೆಯ ಕೇಂದ್ರದಲ್ಲಿ ನಿವಾಶಿಸುತ್ತಾ ಶಕ್ತಿ ಕೊಡುತ್ತಾ ಮತ್ತು ಗ್ರಂಥಿಗಳಲ್ಲಿಯೂ ಸಹ ನಿವಾಶಿಸುತ್ತಿದೆ. ಗ್ರಂಥಿಗಳಲ್ಲಿ ಆರು ಗ್ರಂಥಿಗಳು ಶರೀರದಲ್ಲಿ ವಿವಿಧ ಭಾಗಗಳಲ್ಲಿ ಇದ್ದರೆ ಏಳನೆಯ ಗ್ರಂಥಿ ಶಿರಸ್ಸಿನಲ್ಲಿ ಕಣ್ಣಿನ ಹುಬ್ಬುಗಳ ಮಧ್ಯೆ ಮೇಲ್ಭಾಗದಲ್ಲಿ ಸಮತಲವಾಗಿ ತಲೆಯ ಮಧ್ಯದಲ್ಲಿ ಇದೆ. ಏಳನೆಯ ಗ್ರಂಥಿಯನ್ನು ಗ್ರಂಥಿರಾಜ ಎನ್ನುತ್ತಾರೆ. ಈ ಗ್ರಂಥಿರಾಜನಲ್ಲಿಯೂ ಸಹ ಆತ್ಮ ನಿವಾಸವಿದ್ದು ಉಳಿದ ಆರು ಕೇಂದ್ರಗಳಿಗೂ ತನ್ನ ಶಕ್ತಿಯನ್ನು

ಕಿರಣಗಳ ಮುಖಾಂತರ ಪ್ರಸಾರ ಮಾಡುತ್ತಾ ಗ್ರಂಥಿಗಳನ್ನು ಕೆಲಸ ಮಾಡಿಸುತ್ತಾ ಗ್ರಂಥಿಗಳ ರಸಗಳ ಮೂಲಕ ಆರೋಗ್ಯ, ಅನಾರೋಗ್ಯವನ್ನು ಉಂಟುಮಾಡುತ್ತದೆ. ಶರೀರದಲ್ಲಿ ಕರ್ಮಾನುಸಾರ ಕೆಲಸಗಳ ಒಂದು ಅನುಭವ ಮತ್ತು ಕರ್ಮಾನು ಸಾರ ಆರೋಗ್ಯ, ಅನುಭವ ಜೀವಿಗಿರುತ್ತದೆ. ಆದ್ದರಿಂದ ಕೆಲಸಗಳು ನಡೆಯಲು ಬೇಕಾದ ಶಕ್ತಿ ನಾಡೀಕೇಂದ್ರಗಳ ಮೂಲಕ ಬ್ರಹ್ಮನಾಡಿ ಯಿಂದ ಮತ್ತು ಗ್ರಂಥಿಗಳ ಮುಖಾಂತರ ಗ್ರಂಥಿರಾಜನಿಂದ ಆತ್ಮಶಕ್ತಿ (ದೈವಶಕ್ತಿ) ಪ್ರಸಾರಮಾಡುತ್ತದೆ. ಶರೀರದಲ್ಲಿ ದೈವವು ಎರಡು ವಿಧವಾಗಿ ಜೀವಿಗಳಿಗಾಗಿ ತನ್ನ ಕರ್ತವ್ಯವನ್ನು ನೆರವೇರಿಸುತ್ತಿದೆ. ಆದ್ದರಿಂದ ದೇವಾಲಯಗಳಲ್ಲಿ ಎರಡು ವಿಧಗಳಾಗಿ ಮೇಲಕ್ಕೆ ಏಳು ದ್ವಾರಗಳು, ಒಳಗಡೆಗೆ ಏಳು ದ್ವಾರಗಳನ್ನು ಇಟ್ಟು ತೋರಿಸಿದ್ದಾರೆ. ಆರು ನಾಡೀ ಕೇಂದ್ರಗಳು ಸ್ತಂಬಿಸಿ ಶರೀರದ ಜ್ಞಾಪಕ ಹೋಗಿ ಏಳನೆಯ ಕೇಂದ್ರದಲ್ಲಿ ಲಗ್ನವಾದಾಗ ಮತ್ತು ಶರೀರದಲ್ಲಿ ಆರು ಗ್ರಂಥಿಗಳು ಸ್ತಂಬಿಸಿ ಏಳನೆಯ ಗ್ರಂಥಿಯ ಮೇಲೆ ಗಮನವನ್ನಿಟ್ಟಾಗ ಶರೀರದಲ್ಲಿನ ದೈವ ತಿಳಿಯುತ್ತದೆಂಬ ಉದ್ದೇಶದಿಂದ ಎರಡು ವಿಧಗಳಾಗಿ ದ್ವಾರಗಳನ್ನಿಟ್ಟಿದ್ದಾರೆ. ಎರಡು ವಿಧಾನಗಳು ಮನೋನಿಲುಗಡೆ ಮೇಲೆ ಆಧಾರಪಟ್ಟಿರುತ್ತದೆಂಬ ಉದ್ದೇಶದಿಂದ ದ್ವಾರಗಳನ್ನು ತೋರಿಸಿದ್ದಾರೆ. ಬಲಕ್ಕಾಗಲಿ ಆರೋಗ್ಯಕ್ಕಾಗಲಿ ನಿನ್ನಲ್ಲಿನ ದೇವರೇ ಕಾರಣವೆಂದು ಆ ದೇವರು ನಿನ್ನ ಶರೀರವನ್ನು ಈ ವಿಧವಾಗಿ ಅಧಿಷ್ಠಿಸಿದ್ದಾನೆಂದು ತಿಳಿಸುವ ಸಲುವಾಗಿಯೇ ಮೇಲಕ್ಕೂ ಒಳಕ್ಕೂ ಎರಡು ವಿಧಗಳ ದ್ವಾರಗಳನ್ನಿರಿಸಿದ್ದಾರೆ. ತಿರುಪತಿಯಲ್ಲಿ ಮೇಲೆ ಏಳು ದ್ವಾರಗಳು ಒಳಗೆ ಏಳು ದ್ವಾರಗಳನ್ನು ನೋಡಬಹುದು.

# 6. ಗೋಪುರ

ದೇವಾಲಯದಲ್ಲಿ ಗೋಪುರ, ಅದಕ್ಕೆ ಏಳು ದ್ವಾರಗಳಿರುತ್ತವೆಂದು ಹೇಳಿಕೊಂಡಿದ್ದೇವೆ. ಗೋಪುರಕ್ಕೆ ಕೆಳಗಿನಿಂದ ಮೇಲಿನ ತನಕ ದ್ವಾರಗಳಿದ್ದು

ಏಳು ಅಂತಸ್ತುಗಳಾಗಿ ಕಾಣಿಸುತ್ತಿರುತ್ತದೆ. ಅಷ್ಟೇ ಅಲ್ಲದೆ ಗೋಪುರಕ್ಕೆ ಕೆಳಗಿನಿಂದ ಮೇಲಿನವರೆಗೂ ಅಂದರೆ ಏಳು ಅಂತಸ್ತುಗಳ ಉದ್ದಕ್ಕೂ ಸುತ್ತಲೂ ಅನೇಕ ಗೊಂಬೆಗಳನ್ನು ಚಿತ್ರಿಸಲ್ಪಟ್ಟಿರುತ್ತವೆ. ಆ ಪ್ರತಿಮೆಗಳು ಶೃಂಗಾರದಿಂದ ಪ್ರಾರಂಭವಾಗಿ ಭಕ್ತಿಯವರೆಗೂ, ಸ್ನೇಹದಿಂದ ಪ್ರಾರಂಭವಾಗಿ ಶತೃತ್ವದವರೆಗೂ, ಮದುವೆಯಿಂದ ಹಿಡಿದು ಸಂತಾನ ಕೋರುವವರೆಗೂ, ವಾಯಿದ್ಯಗಳನ್ನು ನುಡಿಸುವುದು, ನಾಟ್ಯ ವಾಡುವುದು, ಕುದುರೆಗಳನ್ನೇರಿ ತಿರುಗುವುದು, ಯುದ್ಧ ಮಾಡುವುದು, ಗಂಡ ಹೆಂಡತಿಯರು ಭಕ್ತಿಯಿಂದ ಇರುವುದು, ಶೃಂಗಾರದಲ್ಲಿ ಎಷ್ಟೋ ಭಂಗಿಮಗಳು ಮೊದಲಾದ ಮತ್ತೆಷ್ಟೋ ಮಾನವನ ಜೀವನದಲ್ಲಿ ಸಂಭವಿಸುವ ಸಂಘಟನೆ ಗಳನ್ನೆಲ್ಲಾ ತೋರಿಸುವಂತೆ ಇರುತ್ತದೆ. ಹೀಗೆ ಎಷ್ಟೋ ಜೀವನದ ಸಂಘಟನೆಗಳ ದೃಶ್ಯಗಳನ್ನು ಚಿತ್ರಿಸುವುದರಲ್ಲಿ ಪೂರ್ವದ ಹಿರಿಯರ ಉದ್ದೇ ಶವೇನೋ ಎಂದು ಯೋಚಿಸಿದಾಗ ಸ್ವಲ್ಪ ವಿವರ ತಿಳಿಯುತ್ತದೆ.



**(ಗೋಪುರ)**

ಗೊಂಬೆಗಳ ರೂಪದಲ್ಲಿ ಗೋಪುರದ ಮೇಲೆ ಚಿತ್ರಿಸಿರುವ ದೃಶ್ಯಗಳೆಲ್ಲ ಮಾನವನ ಜೀವನದಲ್ಲಿ ನಡೆಯುವಂತವುಗಳೇ ಆಗಿವೆ. ಹುಟ್ಟಿದಂದಿನಿಂದ ಶಿಶುವಿನ ದಶೆಯಿಂದ ಮರಣದವರೆಗೂ ನಡೆಯುವ ಕೆಲಸಗಳೆಲ್ಲಾ ಶರೀರದಲ್ಲಿನ ಬ್ರಹ್ಮನಾಡಿಯಲ್ಲಿ ನಾಡಿಕೇಂದ್ರಗಳ ಮುಖಾಂತರ ಆತ್ಮವೇ ಮಾಡಿಸುತ್ತಿದೆ. ಶರೀರದಲ್ಲಿ ಮೇಲಿನಿಂದ ಕೆಳಗಿನವರೆಗೂ ವ್ಯಾಪಿಸಿಕೊಂಡಿರುವ ಬ್ರಹ್ಮನಾಡಿ ಮುಖಾಂತರವೇ ಈ ಕೆಲಸಗಳೆಲ್ಲ ನಡೆಯುತ್ತಿವೆಯೆಂದು ಮತ್ತು ಬ್ರಹ್ಮನಾಡಿಯಲ್ಲಿ ಮೇಲಿನಿಂದ ವ್ಯಾಪಿಸಿಕೊಂಡಿರುವ ಆತ್ಮವೇ ಈ ಕೆಲಸಗಳು ನಡೆಯಲು ಚೈತನ್ಯ ಕೊಡುತ್ತಿದೆಯೆಂದು ತಿಳಿಯುವಂತೆ ಗೋಪುರದ ಮೇಲೆ ಕೆಳಗಿನಿಂದ ಮೇಲಿನ ವರೆಗೂ ಎಷ್ಟೋ ಸಂಘಟನೆಗಳ ಚಿತ್ರಗಳನ್ನು ಇಟ್ಟಿದ್ದಾರೆ. ದೇವಾಲಯ ಗಳ ಹತ್ತಿರ ದೇವರ ಗೊಂಬೆಗಳು ಇರಬೇಕೇ ಹೊರತು, ನಾಟ್ಯ ವಾಡುವಂತವು ಗಳು, ಯುದ್ಧ ಮಾಡುವಂತವುಗಳು, ಸ್ತ್ರೀ ಪುರುಷರ ಶೃಂಗಾರಕ್ಕೆ ಸಂಬಂಧಿಸಿ ದಂತವುಗಳು ಏತಕ್ಕಾಗಿ ಇರಬೇಕೆಂಬ ಪ್ರಶ್ನೆ ಬಂದಾಗ ಉತ್ತರಕ್ಕಾಗಿ ಹುಡು ಕಾಡಿದಾಗ ಪ್ರತಿ ಕೆಲಸಕ್ಕೂ, ಪ್ರತಿ ಕದಲಿಕೆಗೂ ಕರ್ಮಗಳೆಲ್ಲ ನಡೆಯಲು ಆತ್ಮವೇ ಆಧಾರವೆಂದು ತಿಳಿಯುವಂತೆ ಗೋಪುರದ ಮೇಲೆ ಅನೇಕ ತರಹದ ಗೊಂಬೆಗಳನ್ನಿರಿಸಿದ್ದಾರೆ. ಸರ್ವ ಕಾರ್ಯಗಳು ಆತ್ಮದಿಂದಲೇ ನಡೆಯುತ್ತಿವೆ ಎನ್ನುವಂತೆ ಏಳು ದ್ವಾರಗಳ ಎರಡು ಕಡೆಗಳಲ್ಲಿಯೂ ಕಾರ್ಯಗಳ ದೃಶ್ಯಗಳನ್ನಿರಿ ಸಿದ್ದಾರೆ. ಗೋಪುರದ ಮೇಲೆ ಅನೇಕ ಪ್ರತಿಮೆಗಳನ್ನಿರಿಸಿರುವುದರಿಂದ ಶರೀರದಲ್ಲಿನ ದೇವರ ಕರ್ತವ್ಯವನ್ನು ತಿಳಿಯಬಲ್ಲರೆಂಬುದೇ ಹಿರಿಯರ ಉದ್ದೇಶ.

ಅನೇಕ ತರಹದ ಬೊಂಬೆಗಳಿರುವ ಗೋಪುರವನ್ನು ಗರ್ಭಗುಡಿ ಮುಂದೆಯೇ ಏಕೆ ಇಡಬೇಕೆನ್ನುವುದು ಒಂದು ಸಂಶಯವಾದಾಗ, ಆತ್ಮವನ್ನು ಆತ್ಮ ಕರ್ತವ್ಯವನ್ನು ತಿಳಿಸುವುದೇ ಗೋಪುರವಾದರೆ ಗುಡಿಯ ಮುಂದೆ ಅಲ್ಲದೆ ಗುಡಿಯ ಪಕ್ಕದಲ್ಲಿ ಇರಿಸಬಹುದಲ್ಲವೆ ! ಅಥವಾ ಗುಡಿಯ ಹಿಂಬದಿಯಲ್ಲಾದರೂ ಇರಿಸಬಹುದಲ್ಲವೇ ಎಂಬ ಪ್ರಶ್ನೆಗಳು ಉದ್ಭವಿಸಬಲ್ಲವು. ಅದಕ್ಕೆ ಸಮಾಧಾನ ವೇನೋ ನೋಡೋಣ. ಗೋಪುರದ ಮೇಲೆ ಗೊಂಬೆಗಳನ್ನಿರಿ ಸುವುದು,

ಆತ್ಮ ವಿಧಾನ ತಿಳಿಸುವುದೊಂದೇ ಆಗಿದ್ದರೆ ಗೋಪುರ ಅದರ ಪಕ್ಕದಲ್ಲಿ ಗುಡಿಯನ್ನು ನಿರ್ಮಿಸಬಹುದು. ಹಾಗೆ ಗುಡಿಯ ಪಕ್ಕದಲ್ಲಿ ಅಲ್ಲದೇ ಗುಡಿ ಮುಂದೆಯೇ ನಿರ್ಮಿಸುವುದರಲ್ಲಿ ಮತ್ತೊಂದು ವಿಧಾನವಿದೆ ಎಂದು ತಿಳಿಯುತ್ತದೆ. ಗುಡಿಯ ಮುಂದೆ ಗೋಪುರವಿದ್ದರೆ ಗುಡಿಯೊಳಗೆ ಹೋಗುವವರು ಗೋಪುರವನ್ನು ದಾಟಿಹೋಗಬೇಕಾಗಿರುತ್ತದೆ. ಅದೇ ಪಕ್ಕದಲ್ಲಿದ್ದಿದ್ದರೆ ಗೋಪುರ ದಾಟಿ ಹೋಗಲು ಸಾಧ್ಯವಿಲ್ಲ. ಗುಡಿ ಮುಂದೆ ಗೋಪುರ ವಿರುವುದರಿಂದ ತಪ್ಪದೆ ಅದನ್ನು ನೋಡಿದ ನಂತರವೇ ಗುಡಿ ಕಾಣಿಸುತ್ತದೆ. ಹಾಗೆ ಆಲ್ಲದೆ ಪಕ್ಕದಲ್ಲಿರುವುದರಿಂದ ಮೊದಲು ಗೋಪುರವನ್ನು ನೋಡದೇ ನೇರವಾಗಿ ಗುಡಿಯನ್ನೇ ಭಕ್ತರು ನೋಡಬಲ್ಲರು. ಅದರಿಂದ ಗುಡಿಯೊಳಗೆ ಹೋಗುವ ಮುನ್ನವೇ ತಿಳಿಯಬೇಕಾಗಿರುವ ವಿಷಯವನ್ನು ತಿಳಿಯಲಾರರು. ಆತ್ಮ ಅಥವಾ ದೇವರು ಶರೀರದಲ್ಲಿ ಈ ವಿಧವಾಗಿದ್ದಾನೆಂದು ತಿಳಿಯದೇ ಹೋಗುವುದೇ ಅಲ್ಲದೆ ಮತ್ತೊಂದು ವಿಧಾನವೂ ಸಹ ತಪ್ಪಿ ಹೋಗುತ್ತದೆ, ಅದು ಏನೆಂದರೆ!

ಗೋಪುರದ ಮೇಲೆ ಅನೇಕ ಗೊಂಬೆಗಳಿರುತ್ತವೆ! ಅವುಗಳಲ್ಲಿ ನಮ್ಮ ಮನಸ್ಸನ್ನು ಚಲಿಸುವಂತೆ ಮಾಡುವವು, ಮರೆತುಹೋದ ವಿಷಯಗಳು ಜ್ಞಾಪಕಕ್ಕೆ ಬರುವಂತೆ ಮಾಡುವವು, ಸುಲಭವಾಗಿ ಮನಸ್ಸನ್ನು ಆಕರ್ಷಿಸುವಂತಹವುಗಳು ಮೊದಲು ಕಾಣಿಸುವಂತೆ ನಿರ್ಮಿಸಿದ್ದಾರೆ. ಶೃಂಗಾರ ಪುರುಷರಿಗೆ ಬೆತ್ತಲೆ ಗೊಂಬೆಗಳು, ಯುದ್ಧ ಪ್ರಿಯರಿಗೆ ಹೋರಾಟದ ಗೊಂಬೆಗಳು, ಸಂಗೀತ ಪ್ರಿಯರಿಗೆ ವಾದ್ಯದ ಗೊಂಬೆಗಳು ಹೀಗೆ ಮೊದಲಾದ ಗೊಂಬೆಗಳು ಇನ್ನು ಮುಂತಾದವರಿಗೆ ಕಾಣಿಸುತ್ತಿರುತ್ತವೆ. ಎಲ್ಲ ತರಹದವರಿಗೂ ಎಲ್ಲ ತರಹದ ಚಿತ್ರಗಳು ಕಾಣಿಸುವಂತೆ ಗೋಪುರದ ನಿರ್ಮಾಣವಿರುತ್ತದೆ. ದೇವಾಲಯಕ್ಕೆ ಹೋಗುವ ಪ್ರತಿಯೊಬ್ಬರೂ ಮೊದಲು ಗೋಪುರವನ್ನು ದರ್ಶನ ಮಾಡಿಕೊಂಡು ನಂತರವೇ ದೇವರನ್ನು ದರ್ಶಿಸಬೇಕಾಗಿರುತ್ತದೆ. ಪ್ರತಿಯೊಬ್ಬರೂ ಮೊದಲು ನೋಡಬೇಕಾಗಿರುವುದು ಗೋಪುರವೇ ಎಂಬಂತೆ ಗುಡಿ ಮುಂಭಾಗದಲ್ಲಿಯೇ ಗೋಪುರವನ್ನು ನಿರ್ಮಿ

ಸಿದ್ದಾರೆ. ಗುಡಿಗೆ ಹೋದವರು ಮೊದಲು ಗೋಪುರವನ್ನು ನೋಡಿದಾಗ ಅವುಗಳ ಮೇಲಿನ ಬೊಂಬೆಗಳು ಕಾಣಿಸುತ್ತವೆ. ಯಾರಿಗೆ ಆಸಕ್ತಿ ಇರುವ ಬೊಂಬೆಗಳು ಅವರಿಗೆ ಕಾಣಿಸುವುದರಿಂದ ಗುಡಿಯ ಮುಂಭಾಗಕ್ಕೆ ಹೋದವರಿಗೆ ಅವರವರ ತಲೆಗಳಲ್ಲಿ ಯೋಚನೆಗಳು ಹುಟ್ಟಲು ಪ್ರಾರಂಭವಾಗುತ್ತವೆ. ಹಾಗೆ ಅವರ ತಲೆಗಳಲ್ಲಿ ಯೋಚನೆಗಳನ್ನು ಉತ್ಪತ್ತಿಯಾಗುವಂತೆ ಮಾಡುವುದೇ ಗೋಪುರದ ಒಂದು ಉದ್ದೇಶವಾಗಿದೆ. ಪ್ರತಿ ಮಾನವನಿಗೂ ಯೋಚನೆ ಗಳಿರುವುದು ಸಹಜವೇ ಆಗಿದ್ದರೂ ದೇವರ ಸನ್ನಿಧಾನದಲ್ಲಿ ಮನಸ್ಸನ್ನು ಯೋಚನೆಗಳಿಂದ ಮರಳಿಸಿ ದೇವರ ಮೇಲೆ ಇಡಬೇಕೆನ್ನುವುದೇ ಮುಖ್ಯ ಉದ್ದೇಶ. ಗೋಪುರದ ಹತ್ತಿರಕ್ಕೆ ಹೋಗುತ್ತಲೇ ಮರೆತು ಹೋದವುಗಳು ಮನಸ್ಸಿನಲ್ಲಿ ಇಲ್ಲದವುಗಳು ಜ್ಞಾಪಕಕ್ಕೆ ಬರುತ್ತಿವೆ. ಹಾಗೆ ಅಡಗಿ ಹೋದವುಗಳು ಹೊರಗೆ ಬಂದಾಗ ಅವುಗಳನ್ನು ಇಲ್ಲದಂತೆ ಮಾಡಿಕೊಳ್ಳುವುದೇ ಮುಖ್ಯ ಕರ್ತ್ಯವ್ಯವೆಂದು, ಹಾಗೆ ಮಾಡಿಕೊಂಡಾಗ ಯಾವ ಯೋಚನೆಯು ಇಲ್ಲದ ನಿರ್ಮಲವಾದ ಮನಸ್ಸನ್ನು ದೇವರ ಮೇಲೆ ನಿಲ್ಲಿಸಬಹುದೆಂದು ಹಿರಿಯರ ಉದ್ದೇಶವಾಗಿತ್ತು.

ಆಲಯದ ಸಮೀಪಕ್ಕೆ ಹೋದವರಿಗೆ ಗೋಪುರದ ಮೇಲೆ ಏಳು ದ್ವಾರಗಳ ಅರ್ಥ, ಅವುಗಳ ಪಕ್ಕದಲ್ಲಿರುವ ಗೊಂಬೆಗಳನ್ನು ನೋಡಿ ಆತ್ಮವೊಂದರ ದೊಡ್ಡ ಕೆಲಸ ತಿಳಿದರೂ ಕೆಲವರಿಗೆ ಗೊಂಬೆಗಳನ್ನು ನೋಡಿ ಮನಸ್ಸು ಯೋಚನೆಗಳಲ್ಲಿ ಮುಳುಗಿ ಹೋಗುವುದು ಸಹಜವೇ ಆಗಿರುತ್ತದೆ. ಹಾಗೆ ಯೋಚನೆಗಳು ಬಂದಕೂಡಲೇ ಕೆಲವರು ದೇವರ ಆಲಯದಲ್ಲಿ ಅಂತಹ ಯೋಚನೆಗಳು ಬರಬಾರದೆಂದು ತಿಳಿದು ನಿಗ್ರಹಿಸಿಕೊಳ್ಳುತ್ತಾರೆ. ಹಾಗೆ ಬಂದ ಯೋಚನೆಗಳನ್ನು ಅಡಗಿಸಿ ಹಾಕುವುದರಿಂದ ನಂತರ ಸ್ವಲ್ಪ ಸಮಯದವರೆಗೂ ಯೋಚನೆಗಳು ಬಾರದೇ ಮನಸ್ಸು ಒಂದು ಕಡೆ ನಿಂತು ದೇವರ ಮೇಲೆ ಗುರಿ ಉಂಟಾಗುತ್ತದೆಂದು ಹಿರಿಯರು ಹೇಳುತ್ತಿದ್ದರು.

ಗೋಪುರದ ಮೇಲೆ ಬೊಂಬೆಗಳನ್ನು ನೋಡಿ ಚಲಿಸಿದ ಮನಸ್ಸು ಕೂಡಲೇ ಚಲನೆಯಾಗದಿದ್ದರೆ ಗೋಪುರ ದಾಟಿ ಹೋದನಂತರ ಧ್ವಜ ಸ್ಥಂಭವೊಂದರ ದೃಶ್ಯದಿಂದ ಅದರಲ್ಲಿನ ಭಾವನೆಯಿಂದ ಮನಸ್ಸು ಚಲಿಸದೇ ನಿಂತು ಹೋಗುತ್ತದೆ. ಗೋಪುರದ ಬಳಿ ಆರಂಭವಾದ ಮನೋಚಲನೆಯು ಗೋಪುರ ದಾಟುವುದರೊಳಗೆ ನಿಲ್ಲದಿದ್ದರೆ ಧ್ವಜಸ್ಥಂಭದ ಬಳಿಯಾದರೂ ನಿಲ್ಲಬೇಕು. ಅಲ್ಲಿಯೂ ಸಹ ನಿಲ್ಲದಿದ್ದರೆ ಕೊನೆಗೆ ಗರ್ಭಗುಡಿ ಮುಂದಿರುವ ಗಂಟೆಯ ಬಳಿಯಾದರೂ ನಿಲ್ಲಬೇಕು. ಮನಸ್ಸಿನ ಒಂದು ಯೋಚನೆಗಳನ್ನು ನಿಲ್ಲಿಸಲು ಧ್ವಜಸ್ಥಂಭದಲ್ಲಿ ಗುಣಗಳ ವಿವರ, ಗಂಟಾನಾದದಲ್ಲಿ ಯೋಚನೆ ನಿಂತುಹೋಗುವ ಒಂದು ಅರ್ಥವನ್ನು ಅಳವಡಿಸಿ ಇಟ್ಟಿದ್ದಾರೆ. ಸಹಜವಾಗಿರುವ ಗುಣಗಳು ಯೋಚನೆಗಳ ರೂಪದಲ್ಲಿ ಬರುತ್ತಿರುತ್ತವೆಂದು ಗೋಪುರದ ಬಳಿ ಗುಣಗಳು ಉದ್ರೇಕಗೊಳ್ಳುವಂತೆ ಮಾಡಿ ಹಾಗೆ ಉದ್ರೇಕಗೊಂಡ ಮಾನವನ ಗುಣಗಳು ಅಡಗಿ ಹೋದಾಗಲೇ ದೇವರು ತಿಳಿಯುತ್ತಾನೆಂದು ತಿಳಿಸುವ ಸಲುವಾಗಿ ಗೋಪುರ ಅದರ ನಂತರ ಧ್ವಜಸ್ಥಂಭ ಕೊನೆಯದಾಗಿ ಗರ್ಭಗುಡಿಯ ಮುಂದೆ ಗಂಟೆ ಹೊಡೆಯಲು ಇಟ್ಟಿದ್ದಾರೆ. ಮನಸ್ಸು ನಿಲುಗಡೆಯಿಲ್ಲದೆ ಭಕ್ತಿ ನಿಷ್ಪ್ರಯೋಜನವೆಂದು ತಿಳಿಸುವ ಸಲುವಾಗಿ ಆಲಯದಲ್ಲಿ ನಿರ್ಮಿಸಿದ ನಿರ್ಮಾಣದಲ್ಲಿ ಗೋಪುರವು ಸಹ ಒಂದು ಭಾಗವೆಂದು ತಿಳಿಯಬೇಕು. ಶರೀರದಲ್ಲಿ ದೇವರು ಆತ್ಮ ರೂಪದಲ್ಲಿದ್ದಾನೆಂದು, ದೇವರಿಂದಲೇ ಪ್ರತಿ ಚಲನೆಯೂ ಇದೆ ಎಂದು ಎಲ್ಲಾ ಕೆಲಸಗಳು ಏಳು ನಾಡೀಕೇಂದ್ರಗಳ ಮೂಲಕ ನಡೆಯುತ್ತಿವೆಯೆಂದು ತಿಳಿಸುತ್ತ ಗೋಪುರ ನಿರ್ಮಿಸಲ್ಪಟ್ಟಿದೆಯೆಂದು ತಿಳಿಯಬೇಕು.

# 7. ರಾಕ್ಷಸಾಕಾರ

ಗರ್ಭಗುಡಿಯ ಮುಂದೆ ಬರುವ ಗೋಪುರ ಅನೇಕ ಆಕಾರಗಳ ಪ್ರತಿಮೆಗಳಿಂದ ತುಂಬಿದ್ದರೆ ಗೋಪುರದ ಮೇಲೆ ಕಳಶಗಳಿಗೆ ಕೆಳಗಡೆ ಪಕ್ಕದಲ್ಲಿ

ಕೆಳಕ್ಕೆ ಕಾಣಿಸುವಂತೆ ವಿಕೃತಾಕಾರವಿರುತ್ತದೆ. ಆ ವಿಕೃತಾಕಾರವು ನಾಲ್ಕು ಕಡೆಗೂ ಕಾಣಿಸುವಂತೆ ಇಟ್ಟಿರುವುದನ್ನು ಗಮನಿಸಬಹುದು. ಈ ವಿಧವಾಗಿ ಸಂಪ್ರದಾಯ ಪದ್ಧತಿಯಾಗಿ ಕಟ್ಟಿರುವ ದೇವಾಲಯಗಳಲ್ಲಿ ಗೋಚರಿಸುತ್ತಿದೆ ಎಂದು ಮತ್ತೊಮ್ಮೆ ತಿಳಿಸುತ್ತಿದ್ದೇವೆ. ಗೋಪುರದ ಮೇಲಿರುವ ಗೊಂಬೆಗಳಿಗೆಲ್ಲ ಮೇಲೆ ವಿಕೃತಾಕಾರ ಕೆತ್ತಿರುವುದು ಈಗಲೂ ತಮಿಳುನಾಡಿನಲ್ಲಿ ರಾಯವೇಲೂರಿನಲ್ಲಿ ನೋಡಬಹುದು, ಆಂಧ್ರದಲ್ಲಿಯೂ ಸಹ ಬಹಳ ಪುರಾತನ ದೇವಾಲಯಗಳ ಮೇಲೆಯೂ ಸಹ ನೋಡಬಹುದು. ಹಾಗೆ ಗೋಪುರದ ಮೇಲೆ ವಿಕೃತಾಕಾರವನ್ನು ಇಟ್ಟು ತೋರಿಸುವುದರಲ್ಲಿ ಅರ್ಥವೇನೆಂದರೆ! ಗೋಪುರದ ಮೇಲೆ ಗೊಂಬೆಗಳೆಲ್ಲ ನಮ್ಮ ಜೀವನದ ಸಂಘಟನೆಗಳೇ ಎಂದು ತಿಳಿದುಕೊಂಡಿದ್ದೇವೆ. ನಮ್ಮ ಜೀವನದ ಸಂಘಟನೆಯ ಕಾರ್ಯಗಳೆಲ್ಲವೂ ಕರ್ಮ ಪ್ರೇರೇಪಿತ ಗುಣಗಳಿಂದ ನಡೆಯುತ್ತಿರುವವುಗಳೇ. ಆದ್ದರಿಂದ ಗೋಪುರದ ಮೇಲಿರುವ ಸಂಘಟನಾ ಚಿತ್ರಗಳೆಲ್ಲವೂ ಮಾಯಾ ಪೂರಿತವಾದವುಗಳೇ ಆಗಿರುತ್ತವೆ. ಈ ಮಾಯೆಯನ್ನು ಬಿಟ್ಟು ಆಚೆಗೆ ಹೋದಾಗಲೇ ದೈವ ತಿಳಿಯುತ್ತದೆಂಬ ಸಂದೇಶದಿಂದಲೇ ಗೋಪುರದ ನಂತರ ಗುಡಿಯಲ್ಲಿ ದೇವರನ್ನು ಇಟ್ಟಿದ್ದಾರೆ. ಮೊದಲು ಗೋಪುರದ ಮೇಲೆ ಚಿತ್ರಿಸಿರುವ ಚಿತ್ರಗಳೆಲ್ಲವೂ ಮಾಯಾ ಆವರಣದೊಳಗಿನವೆ ಎಂದು ತಿಳಿಸುವ ಉದ್ದೇಶದಿಂದ ಗೋಪುರದ ಮೇಲ್ಭಾಗದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಕಾಣಿಸುವಂತೆ ವಿಕೃತಾಕಾರವನ್ನಿರಿಸಿದ್ದಾರೆ.

ಗೋಪುರದ ಮೇಲೆ ವಿಕೃತಾಕಾರವು ಮಾಯೆಗೆ ಗುರುತು. ಗುಡಿಯಲ್ಲಿನ ಸೌಮ್ಯವಾದ ಆಕಾರವು ದೇವರ ಗುರುತು. ದೇವಾಲಯಗಳಲ್ಲಿ ಹೊರಗೆ ಗೋಪುರದಲ್ಲಿ ವಿಕೃತಾಕಾರವಾಗಿ ಮಾಯೆಯನ್ನು, ಒಳಗಿನ ಗುಡಿಯಲ್ಲಿ ಸೌಮ್ಯಾಕಾರವಾಗಿ ದೇವರನ್ನು ಗುರುತಾಗಿ ನಿರ್ಮಿಸಿದ್ದಾರೆ. ಗೋಪುರದ ಮೇಲೆ ವಿಕೃತಾಕಾರವನ್ನನುಸರಿಸಿ ಅದು ಮಾಯೆಯೆಂದು ಅದಕ್ಕೆ ಕೆಳಗಿನ ದಿಕ್ಕಿನಲ್ಲಿರುವ ಚಿತ್ರಗಳೆಲ್ಲವೂ ಅದರವೇ ಎಂಬುವಂತೆ ತಿಳಿಯುತ್ತದೆ. ವಿಕೃತಾಕಾರದ ಕೋರೆಗಳು ಇದ್ದು, ತೀಕ್ಷಣವಾದ ದೃಷ್ಠಿ ಇದ್ದು, ಬಾಯಿ ತೆರೆದಂತಹ ಸಿಂಹದ ತಲೆಯ

ಆಕೃತಿಯನ್ನು ಹೋಲುವಂತಿರುತ್ತದೆ. ಆದ್ದರಿಂದ ಮಾಯಾ ಆಕೃತಿಯನ್ನು ಸಿಂಹದ ತಲೆ ಎಂದು ಹೇಳುವುದು ಸಹ ನಡೆಯುತ್ತಿದೆ. ಸಿಂಹದ ತಲೆಯಂತಿರುವ ಪ್ರಭಾವಳಿಯೆಂಬ ಮಾಯೆ ಎಷ್ಟು ವಿಧಗಳಾಗಿ ಇರುವುದೋ ಗೋಪುರದ ಮೇಲೆ ಅನೇಕ ಚಿತ್ರಗಳಾಗಿ ತೋರಿಸಿದ್ದಾರೆ. "ಗುಣಮಯಿಮಮ ಮಾಯಾ ದುರತ್ಯಯ" ಎಂಬ ಭಗವಂತನ ವಾಕ್ಯದ ಪ್ರಕಾರ ಮಾಯೆಯನ್ನು ಜಯಿಸುವುದು ದುಸ್ಸಾಧ್ಯವೆನ್ನುವಂತೆ ಮಾಯೆ ಪಶು ಬಲವನ್ನು ಹೊಂದಿದ ಸಿಂಹದಂತಹ ದ್ದೆಂದೂ ಸಹ ತಿಳಿಸಿದ್ದಾರೆ. ವಾಸ್ತವಾಗಿ ದೇವರನ್ನು ತಿಳಿಯಬೇಕೆಂದರೆ ಸುಲಭ ವಾದ ಕೆಲಸವಲ್ಲ. ಮಾಯೆಯನ್ನು ಪೂರ್ತಿಯಾಗಿ ಜಯಿಸಬೇಕಾಗಿದೆ. ಮಾಯೆ ಬಲವಾದುದೆಂದು ಭಯಪಡಬೇಕಾದ ಅವಶ್ಯಕತೆಯೂ ಇಲ್ಲ. ನನಗೆ ಶರಣು ಬೇಡಿದವನು ಮಾಯೆಯನ್ನು ಸುಲಭವಾಗಿ ಜಯಸಬಲ್ಲನೆಂದು ದೇವರೇ ತಿಳಿಸುತ್ತ **"ಮಾಮೇವಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿತೇ"** ಎಂದಿದ್ದಾನೆ. ಭಗವದ್ಗೀತೆಯಲ್ಲಿ ಹೇಳಿರುವಂತೆ ದೇವರಿಗೆ ಶರಣು ಬೇಡದೇ ಹೋದರೆ ಮಾನವನು ಕಾಡಿನಲ್ಲಿ ಹಸಿದಿರುವ ಸಿಂಹದ ಹಿಡಿತದಿಂದ ತಪ್ಪಿಸಿಕೊಳ್ಳಲಾಗದಂತೆ ಅನೇಕ ಸಂಘಟನೆಗಳ ರೂಪದಲ್ಲಿ, ಬಂಧುಗಳ ರೂಪದಲ್ಲಿ, ಹೆಂಡತಿಯರ ರೂಪದಲ್ಲಿ, ಅನೇಕ ವಿಧಗಳಾಗಿದ್ದು ವಿರೋಧಗಳನ್ನು ಕಲ್ಪಿಸುವ ಮಾಯೆಯಿಂದ ತಪ್ಪಿಸಿಕೊಳ್ಳಲಾರರು. ಎಕೆ–47 ರೈಫಲ್ ಇರುವಾಗ ಬಲವಾದ ಸಿಂಹವನ್ನಾದರೂ ಸುಲಭವಾಗಿ ಸುಟ್ಟು ಹಾಕಬಲ್ಲೆವು. ಹಾಗೆಯೇ ದೈವಜ್ಞಾನ ಹೊಂದಿ ಸರ್ವ ವಿಧಗಳಿಂದಲೂ ದೇವರಿಗೆ ಶರಣು ಬೇಡಿದವನು ದೈವಜ್ಞಾನವೆಂಬ ಬಂದೂಕಿನಿಂದ ಮಾಯೆಯೆಂಬ ಸಿಂಹವನ್ನು ಸುಲಭವಾಗಿ ಸಾಯಿಸಬಹುದು. ಆದ್ದರಿಂದ ಮಾಯೆ ಬಗ್ಗೆ ಜಾಗ್ರತೆಯಾಗಿ, ನಿರ್ಭಯವಾಗಿ ಇರಬೇಕೆಂದರೆ ದೈವಜ್ಞಾನವೆಂಬ ಆಯುಧ ಬೇಕಾಗಿರುತ್ತದೆ.

# 8. ಧ್ವಜ ಸ್ಥಂಭ

ಗೋಪುರ ದಾಟಿದ ನಂತರ ಮೊದಲು ಧ್ವಜ ಸ್ಥಂಭ ಕಾಣಿಸುತ್ತದೆ. ಧ್ವಜಸ್ಥಂಭ ಎಂದರೆ ಪತಾಕೆ ಸ್ಥಂಭ ಅಥವಾ ಬಾವುಟ ಸ್ಥಂಭವೆಂದು ಅರ್ಥವಿದೆ. ಒಂದು ರಾಜ್ಯವನ್ನು ತಿಳಿಸುವುದು ಬಾವುಟ ಅಥವಾ ಒಬ್ಬರ ಹಿರೆತನವನ್ನು ತಿಳಿಸುವುದು ಬಾವುಟ. ಇಲ್ಲಿ ದೇವಾಲಯದಲ್ಲಿ ಧ್ವಜಸ್ಥಂಭ ಏಕಿರಬೇಕು? ಇಲ್ಲಿ ಯಾರ ಹಿರೆತನವನ್ನು ತಿಳಿಸಲು ಇದೆಯೆಂಬ ಪ್ರಶ್ನೆಗಳು ಬಾರದೇ ಇರಲಾರವು. ದೇವಾಲಯದಲ್ಲಿ ದೇವರ ರಾಜ್ಯವನ್ನು ಸೂಚಿಸುವುದಕ್ಕೆಂದೇ ಬಾವುಟ ಇದೆ ಎಂದು ತಿಳಿಯಬೇಕು. ಧ್ವಜಸ್ಥಂಭಕ್ಕಿಂತ ಮುಂದಿರುವ ಗೋಪುರದಲ್ಲಿ ಆತ್ಮವನ್ನು ಅಥವಾ ದೇವರನ್ನು ತಿಳಿಯಲು ಏಳು ದ್ವಾರಗಳು ಇದ್ದರೂ ಸಹ ಅವುಗಳ ಸುತ್ತಲೂ ಮಾಯೆಗೆ ಸಂಬಂಧಿಸಿದ ಗೊಂಬೆಗಳನ್ನು ತೋರಿಸಲಾಗಿದೆ. ಗೋಪುರದ ಮೇಲೆ ಮಾಯೆ ವಿಕೃತಾಕಾರ ದರ್ಶನ ಕೊಡುತ್ತಿದೆ. ಎಂದರೆ ಶರೀರದಲ್ಲಿ ದೇವರಿದ್ದರೂ ಮಾಯೆ ಶರೀರವನ್ನು ಆವರಿಸಿಕೊಂಡು ಇದೆಯೆಂದು ತಿಳಿದುಬರುತ್ತಿದೆ. ಅಷ್ಟೇ ಅಲ್ಲದೇ ಮೇಲೆ ಗೋಚರಿಸುವ ಚಿತ್ರಗಳೆಲ್ಲ ಮಾಯೆಗೆ ಸಂಬಂಧಿಸಿರುವವೇ. ಆದ್ದರಿಂದ ಅವುಗಳನ್ನು ನೋಡುತ್ತಲೇ ಮನಸ್ಸು ಚಂಚಲಿಸುತ್ತದೆ. ಇದನ್ನು ಅನುಸರಿಸಿ ಗೋಪುರದಿಂದ ಧ್ವಜಸ್ಥಂಭದವರೆಗೂ ಮಾಯಾ ರಾಜ್ಯವೆಂದು, ಧ್ವಜಸ್ಥಂಭದಿಂದ ದೇವರ ರಾಜ್ಯವೆಂದು ತಿಳಿಯುವಂತೆ ಧ್ವಜಸ್ಥಂಭವನ್ನು ಇಟ್ಟಿದ್ದಾರೆ. ಧ್ವಜಸ್ಥಂಭದ ಮೇಲೆ ಮಾಯಾ ಗುರುತನ್ನಿಟ್ಟು ಅದರ ಮೇಲೆ ಮಾಯೆಗೆ ಮೀರಿರುವುದೆಂದು ದೈವದ ಒಂದು ಗುರುತೂ ಸಹ ತೋರಿಸಿದ್ದಾರೆ. ಅದು ಹೇಗಿದೆ ಎಂಬುದನ್ನು ವಿವರಿಸಿಕೊಳ್ಳೋಣ.

ದೇವಾಲಯದಲ್ಲಿ ಗರ್ಭಗುಡಿ ಮುಂದೆ ಗೋಪುರ ನಂತರ ಧ್ವಜಸ್ಥಂಭ ವಿರುತ್ತದೆ. ಧ್ವಜಸ್ಥಂಭ ಇಷ್ಟೇ ಎತ್ತರವಿರಬೇಕೆಂಬ ನಿರ್ಣಯವಿಲ್ಲ. ಆದ್ದರಿಂದ ಒಂದೊಂದು ದೇವಾಲಯದಲ್ಲಿ ಒಂದೊಂದು ವಿಧದಲ್ಲಿ ಎತ್ತರವಿರುತ್ತದೆ. ಧ್ವಜಸ್ಥಂಭವು ಸಣ್ಣದಾಗಲಿ, ದೊಡ್ಡದಾಗಲಿ ಅದರ ಮೇಲ್ಭಾಗದಲ್ಲಿ ಚಿತ್ರದಲ್ಲಿ ಇದ್ದಂತೆ ಮೂರು ವರಸೆಗಳ ಗಂಟೆಗಳಿರುತ್ತವೆ. ಒಂದೊಂದು ವರಸೆಯಲ್ಲಿ ಆರು ಗಂಟೆಗಳನ್ನು ಕಟ್ಟಿರುತ್ತಾರೆ. ಗಂಟೆಗಳು ಚಿಕ್ಕದಾಗಿದ್ದು ಗಾಳಿಗೆ



ಧ್ವಜ ಸ್ಥಂಭ

ಅಲುಗಾಡುವಂತೆ ಇರುತ್ತವೆ. ಮೂರು ವರಸೆಗಳು ಒಂದೇ ಕಡೆಗೆ ಇರುವುದರಿಂದ ನೋಡುವವರಿಗೆ ಬಾವುಟದಂತೆ ಕಾಣಿಸುತ್ತಿರುತ್ತವೆ. ಗಂಟೆಗಳ ಮೇಲೆ ಸ್ಥಂಭಕ್ಕೆ ಮೇಲ್ಭಾಗದಲ್ಲಿ ಎಣ್ಣೆ ಸುರಿದು ಬತ್ತಿಗಳನ್ನು ಹಾಕಿ ದೊಡ್ಡ ದೀಪವನ್ನು ಬೆಳಗಿಸಲು ಅನುಕೂಲವಾಗುವಂತೆ ತಯಾರು ಮಾಡಿ ಇಟ್ಟಿರುತ್ತಾರೆ. ಪೂರ್ವದಲ್ಲಿ ಪ್ರತಿದಿನವೂ ಸಾಯಂಕಾಲದಲ್ಲಿಯೇ ಏಣಿಯ ಸಹಾಯದಿಂದ ಮೇಲಕ್ಕೆ ಹತ್ತಿ ದೀಪ ಬೆಳಗಿಸುತ್ತಿದ್ದರು. ಸ್ವಲ್ಪ ಕಾಲಕ್ಕೆ ಪೂಜಾರಿಗಳಲ್ಲಿ ಸೋಮಾರಿತನ ಏರ್ಪಡುವುದರಿಂದ, ಉದರಗಳು ಭಾರವಾದುದರಿಂದ ಪ್ರತಿದಿನವೂ ಹತ್ತುವುದಕ್ಕೆ ಬದಲು ತಿಂಗಳಿಗೊಂದು ಸಲ ಹತ್ತಿ ದೀಪ ಬೆಳಗಿಸುತ್ತಿದ್ದರು. ಮತ್ತಷ್ಟು ಕಾಲಕ್ಕೆ ತಿಂಗಳಿಗೊಂದು ಸಲ ಬೆಳಗಿಸುವುದೂ ಸಹ ಬಿಟ್ಟು ವರ್ಷಕ್ಕೊಮ್ಮೆ ಬೆಳಗಿಸಲು ಶುರು ಮಾಡಿದರು. ಕೊನೆಗೆ ಈ ಕಾಲಕ್ಕೆ ಆ ಪದ್ಧತಿಯೂ ಸಹ ಹೋಗಿದೆ. ಆದರೂ ಇಂತಹ ಸಂಪ್ರದಾಯ ಇತ್ತೆಂದು ಗುರುತಿಗಾಗಿ ಕೆಲವು ಸ್ಥಳಗಳಲ್ಲಿ ಮಾತ್ರ ವರ್ಷಕ್ಕೊಂದು ಸಲ ಬೆಳಗಿಸುವುದು ಇದೆ. ಅದು ಕಾರ್ತೀಕ ಪೌರ್ಣಮಿಯ ದಿನದಂದು ಧ್ವಜಸ್ಥಂಭದ ಮೇಲೆ ದೀಪ ಬೆಳಗಿಸುತ್ತಾರೆ. ವರ್ಷಕ್ಕೆಲ್ಲಾ ಸೇರಿಸಿ ಒಂದು ದಿನ ಮಾತ್ರ ಬೆಳಗಿಸುತ್ತಿದ್ದಾರೆ. ಆದ್ದರಿಂದ ವರ್ಷಕ್ಕೆ 365 ದಿನಗಳೆಂದು ಲೆಕ್ಕ ಮಾಡಿ 365 ಬತ್ತಿಗಳನ್ನು ಬೆರೆಸಿ ಒಂದೇ ಬತ್ತಿಯಾಗಿ ಮಾಡಿ ಬೆಳಗಿಸುವುದು ಅಲ್ಲಲ್ಲಿ ಈಗಲೂ ವಾಡಿಕೆಯಲ್ಲಿದೆ. ಕೆಲವು ದೇವಾಲಯಗ ಳಲ್ಲಿ ಪೂರ್ವದ ಸಂಪ್ರದಾಯದ ಪ್ರಕಾರ ಇರಬೇಕಾದ ಧ್ವಜಸ್ಥಂಭವೇ ಇಲ್ಲದಂತೆ ಹೋಗಿದೆ. ಕೆಲವು ಆಲಯಗಳಲ್ಲಿ ಸಂಪ್ರದಾಯ ಬದ್ಧವಾಗಿ ಧ್ವಜಸ್ಥಂಭವಿದ್ದರೂ ಅದಕ್ಕೆ ಗಂಟೆಗಳು ಮೂರು ವರಸೆಗಳಿಲ್ಲದೇ ಹೋಗಿರುವುದೋ, ಒಂದು ವರಸೆ ಮಾತ್ರವೇ ಇರುವುದೋ ಅಥವಾ ಒಂದೇ ಗಂಟೆ ಇರುವುದೋ, ಅಸಲು ಗಂಟೆಗಳೇ ಇಲ್ಲದಂತೆ ಇರುವುದೋ, ದೀಪ ಬೆಳಗಿಸುವುದಕ್ಕೆ ಎಣ್ಣೆ ಹಾಕಿ ಇಡಲು ಅನುಕೂಲವಾಗಿ ಇಲ್ಲದಿರುವುದೋ ಅನೇಕ ತರಹದ ಧ್ವಜಸ್ಥಂಭಗಳು ಕಾಣಿಸುತ್ತಿವೆ. ಕಾಲ ಕಳೆದಂತೆಲ್ಲಾ ಕೆಲವು ಆಲಯಗಳಿಗೆ ಗೋಪುರವೇ ಇಲ್ಲದಂತೆ ಹೋಗಿ ಕೆಲವು ಆಲಯಗಳಿಗೆ ಧ್ವಜಸ್ಥಂಭವೇ ಇಲ್ಲದಂತೆ ಹೋಗಿದೆ. ಕೆಲವು ಆಲಯಗಳಲ್ಲಿ ಇದ್ದರೂ ಅದು ನೋಡುವುದಕ್ಕಷ್ಟೇ ಹೊರತು, ಗಂಟೆಗಳಾಗಲಿ,

ದೀಪವಾಗಲಿ ಇರುವುದೇ ಇಲ್ಲ. ಹೀಗೆ ಸಂಪ್ರದಾಯಗಳೆಲ್ಲ ಇಲ್ಲದಂತಾಗಿ ಇಂದೂ ಮತವು ಪ್ರತ್ಯೇಕವಾದ ಹಿಂದೂ ಮತವಾಗಿ ತಯಾರಾಗಿದೆ. ದೇವಾಲಯಗಳನ್ನು ನಿರ್ಮಿಸಲು ಪ್ರತ್ಯೇಕವಾದ ಆಗಮ ಶಾಸ್ತ್ರವಿದೆ ಎಂದು ಹೇಳುವವರು, ನಾವು ವೇದ ವೇದಾಂಗಗಳನ್ನೆಲ್ಲಾ ಓದಿದ್ದೇವೆಂದು ನಮಗೆ ಎಲ್ಲಾ ತಿಳಿದಿದೆ ಎಂದು ಹೇಳುವವರು, ಸಂಪ್ರದಾಯಗಳು ಬೆಂಕಿಗೆ ಬಿದ್ದು ಹೋಗುತ್ತಿದ್ದರೆ ಅವುಗಳನ್ನು ಕುರಿತು ಏನನ್ನು ಹೇಳದಂತಿದ್ದಾರೆ. ಇಂದೂ ಮತವಾಗಿರುವುದು ಕಾಲಕ್ರಮದಲ್ಲಿ ಹಿಂದೂ ಮತವಾಗಿ ಬದಲಾಗಿ ಹೋಗಿದೆ, ಇಂದೂ ಮತದಲ್ಲಿ ಪೂರ್ವದಲ್ಲಿದ್ದ ಮೇರೆಗಳು, ಆಚಾರಗಳು ಇಲ್ಲದೇ ಹೋಗಿವೆ. ಆದ್ದರಿಂದ ಪ್ರಪಂಚದ ವ್ಯಾಪ್ತವಾಗಿದ್ದ ಇಂದೂ ಮತವು ಕೊನೆಗೆ ಭಾರತ ದೇಶದಲ್ಲಿ ಮಾತ್ರ ಹಿಂದೂ ಮತವಾಗಿ ಉಳಿದುಹೋಗಿದೆ. ಯಾವುದು ಏನಾದರೂ ನಮ್ಮ ಆಚಾರ ವ್ಯವಹಾರಗಳನ್ನು ಕಾಪಾಡಿಕೊಳ್ಳುವುದು ಪುನರುದ್ಧರಿಸಿಕೊಳ್ಳುವುದು ನಮ್ಮ ಕರ್ತವ್ಯವಾಗಿದೆ. ಆದ್ದರಿಂದ ದೇವಾಲಯ ಗಳಲ್ಲಿನ ಹಿಂದಿನ ಪದ್ಧತಿಗಳನ್ನು ಸಂಪೂರ್ಣವಾಗಿ ತಿಳಿದುಕೊಳ್ಳೋಣ.

ದೇವಾಲಯಗಳೆಲ್ಲವೂ ಪೂರ್ವದಲ್ಲಿ ಆಧ್ಯಾತ್ಮಿಕ ಕೇಂದ್ರಗಳಾಗಿ ಇರುತ್ತಿದ್ದ ವೆಂದುಕೊಂಡಿದ್ದೇವೆ ಅಲ್ಲವೇ! ಅದರ ಪ್ರಕಾರ ಧ್ವಜಸ್ಥಂಭದಲ್ಲಿಯೂ ಸಹ ಎಷ್ಟೋ ಅಧ್ಯಾತ್ಮಿಕ ಜ್ಞಾನವು ಮೇಳೈಸಿಕೊಂಡಿದೆ. ಅದೇನೆಂದರೆ ನಮ್ಮ ಶರೀರದಲ್ಲಿನ ಮನಸ್ಸು ಎಡೆಬಿಡದೆ ವಿಷಯ ಚಿಂತನೆಗಳನ್ನು ತಂದು ಇಡುತ್ತಿರುತ್ತದೆ. ಆದು ಯಾವ ವಿಷಯವಾದರೂ ರಾಗದ್ವೇಷಗಳಿಗೆ ಸಂಬಂದಿ ಸಿರುವುದೋ, ಅಥವಾ ಕಾಮ (ಆಸೆ) ದಾನಗಳಿಗೆ ಸಂಬಂಧಿ ಸಿರುವುದೋ, ಅಥವಾ ಲೋಭ ಔದಾರ್ಯಗಳಿಗೆ ಸಂಬಧಿಸಿದುದೋ, ಅಥವಾ ಗರ್ವ ವಿನಯಗಳಿಗೆ ಸಂಬಂಧಿಸಿರುವುದೋ, ಹಾಗೆಯೂ ಅಲ್ಲದೇ ಮೋಹ ವೈರಾಗ್ಯಗಳಿಗೆ ಸಂಬಂಧಿಸಿರುವುದೋ ಅಥವಾ ಕೋಪ ದಯೆಗೆ ಸಂಬಂಧಿ ಸಿರುವುದೋ ಆಗಿರುತ್ತದೆ. ಮನಸ್ಸಿಗೆ ಬರುವ ವಿಷಯ ಯಾವುದಾದರೂ ಅದು ಸಾತ್ವಿಕ, ರಾಜಸ, ತಾಮಸಗಳೆಂಬ ಗುಣಭಾಗದೊಳಗಿನವೆ. ಮೂರು

ಗುಣಗಳನ್ನೇ ಮಾಯೆಯೆಂದು ಭಗವದ್ಗೀತೆಯಲ್ಲಿ ಭಗವಂತನು "ಗುಣಮಯಿ ಮಮ ಮಾಯಾ" ಎಂದು ಹೇಳಿದ್ದಾನೆ. ಮಾಯೆ ಮೂರು ಗುಣಭಾಗಗಳ ರೂಪದಲ್ಲಿದ್ದು ಒಂದೊಂದು ಭಾಗದಲ್ಲಿ ಆರು ವರ್ಗಗಳಾಗಿ ಇದೆ. ಒಂದೊಂದು ವರ್ಗದಲ್ಲಿ ಎರಡು ತರಹದ ಗುಣಗಳಿವೆ. ಉದಾಹರಣೆಗೆ ಆಸೆ ದ್ವೇಷಗಳು ಒಂದು ಗುಂಪೆಂದು ತಿಳಿದುಕೊಳ್ಳಿ. ಇಂತಹ ಗುಂಪುಗಳು ಆರು ಸಾತ್ತ್ವಿಕ ದಲ್ಲಿಯೂ, ರಾಜಸದಲ್ಲಿಯೂ, ತಾಮಸದಲ್ಲಿಯೂ ಇರುವುದರಿಂದ ಧ್ವಜಸ್ಥಂಭದ ಮೇಲೆ ಅವುಗಳಿಗೆ ಗುರುತಾಗಿ ಮೂರು ವರಸೆಗಳ ಗಂಟೆಗಳನ್ನಿರಿಸಿದ್ದಾರೆ. ಒಂದೊಂದು ಗುಣಭಾಗದಲ್ಲಿ ಆರು ಗುಂಪುಗಳ ಗುಣಗಳಿರುವುದರಿಂದ ಆ ವಿವರ ತಿಳಿಯುವಂತೆ ಪ್ರತಿ ಗುಣ ವಿಷಯಗಳಿಗೆ ಪ್ರತೀಕವಾಗಿ ಒಂದೊಂದು ವರಸೆಯಲ್ಲಿ ಆರು ಗಂಟೆಗಳನ್ನಿರಿಸಿದ್ದಾರೆ. ಗಾಳಿ ಕಾಲದಲ್ಲಿ ಗಂಟೆಗಳು ಗಾಳಿಗೆ ಅಲುಗಾಡುತ್ತ ಒಂದರ ನಂತರ ಒಂದು ಶಬ್ಧ ಮಾಡುತ್ತಿರುತ್ತವೆ. ಒಂದು ಗಂಟೆ ಅಲುಗಾಡಿದರೆ ಅದರ ಶಬ್ಧವು ಮುಗಿದುಹೋಗುವ ಮುನ್ನವೇ ಮತ್ತೊಂದು ಗಂಟೆ ಅಲುಗಾಡಿ ಶಬ್ಧ ಮಾಡುತ್ತಿರುತ್ತದೆ. ಅದೇ ವಿಧದಲ್ಲಿಯೇ ನಮ್ಮ ಶರೀರದಲ್ಲಿನ ಮನಸ್ಸು ಬಿಡುವಿಲ್ಲದೇ ವಿಷಯ ಜ್ಞಾಪಕಗಳನ್ನು ತಂದು ಇಡುತ್ತಿರುತ್ತದೆ. ಒಂದು ವಿಷಯದ ಜ್ಞಾಪಕ ಮುಗಿಯದ ಮುನ್ನವೇ ಮತ್ತೊಂದು ವಿಷಯವನ್ನು ತಂದು ಕೊಡುತ್ತಿರುತ್ತದೆ. ಈ ವಿಧವಾಗಿ ಒಂದರ ನಂತರ ಒಂದಾಗಿ ಬರುವ ವಿಷಯಗಳಿಗೆ ಗುರುತಾಗಿ ಗಂಟೆಯ ಅಲೆಗಳಿರುವಂತೆ ಗಂಟೆಗಳನ್ನಿರಿಸಿದ್ದಾರೆ. ಮಾಯಾ ವಿಧಾನವನ್ನು ಗಂಟೆಗಳು ಗಂಟೆಯ ಅಲೆಗಳಾಗಿ ತೋರಿಸಿದರೆ, ಅದನ್ನು ಅಡಗಿಸಿ ಹಾಕುವ ಜ್ಞಾನವಿದೆ ಎಂಬಂತೆ, ಅದನ್ನು ಅಧಿಷ್ಠಿಸಿ ದೈವಜ್ಞಾನವಿದೆ ಎನ್ನುವಂತೆ, ಗಂಟೆಗಳಿಗೆ ಮೇಲ್ಭಾಗದಲ್ಲಿ ಧ್ವಜಸ್ಥಂಬದ ತುದಿಯಲ್ಲಿ ದೊಡ್ಡ ದೀಪವನ್ನಿರಿಸಿದ್ದಾರೆ. ಇದನ್ನು ಪೂರ್ವದಲ್ಲಿ ಜ್ಞಾನಜ್ಯೋತಿ ಎನ್ನುತ್ತಿದ್ದರು. ಇಂದ್ರಿಯ ವಿಷಯಗಳಿಗಿಂತಲೂ ಉನ್ನತವಾದುದು ಜ್ಞಾನ ಆದ್ದರಿಂದ ಗಂಟೆಗಳ ಮೇಲ್ಭಾಗದಲ್ಲಿ ಜ್ಯೋತಿಯನ್ನಿರಿಸಿದ್ದಾರೆ. ವಿಷಯಗಳಿಂದ ಉತ್ಪನ್ನವಾಗುವ ಕರ್ಮವನ್ನು ಸುಡುವುದು ಜ್ಞಾನಾಗ್ನಿ ಆದ್ದರಿಂದ ಗಂಟೆಗಳನ್ನು ಗುಣ ವಿಷಯಗಳಾಗಿ ಮಾಡಿ ಅದರ ಮೇಲ್ಭಾಗದಲ್ಲಿ ಜ್ಞಾನಾಗ್ನಿಗೆ ಚಿಹ್ನೆಯಾಗಿ

ದೀಪವನ್ನು ಬೆಳಗಿಸಿದ್ದಾರೆ. ಗೋಪುರದ ಮೇಲೆ ಗೊಂಬೆಗಳನ್ನು ನೋಡಿ ಆಲೋಚನೆಗಳು ತಲೆಯಲ್ಲಿ ಹೊಳೆಯುತ್ತಿರುವಾಗ ಇಲ್ಲಿಯವರೆಗೂ ನೀನು ಮಾಯೆ ಎಂಬ ಕತ್ತಲೆಯ ಆವರಣದಲ್ಲಿ ಇದ್ದೀಯಾ. ಧ್ವಜಸ್ಥಂಭದ ಬಳಿಯಿಂದ ದೈವ ಆವರಣದೊಳಗೆ ಜ್ಞಾನದ ಬೆಳಕಿನೊಳಗೆ ಪ್ರವೇಶಿಸುತ್ತಿದ್ದೀಯೆಂದು ತಿಳಿಯುವಂತೆ ಬೆಳಗುತ್ತಿರುವ ದೀಪವನ್ನು ಧ್ವಜಸ್ಥಂಭದ ಮೇಲೆ ಇಡುತ್ತಿದ್ದರು. ಪೂರ್ವದಲ್ಲಿ ಧ್ವಜಸ್ಥಂಭದ ವಿವರ ತಿಳಿದವರು ಅಲ್ಲಿಯೇ ತಮ್ಮ ಆಲೋಚನೆಗಳನ್ನು ಇಲ್ಲದಂತೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಧ್ವಜಸ್ಥಂಭದ ಅರ್ಥದ ಪ್ರಕಾರ ತಮ್ಮ ಜ್ಞಾನದಿಂದ ಆಲೋಚನೆಗಳನ್ನು ಕೆಲವರು ಅಡಗಿಸುತ್ತಿದ್ದರು. ಕೆಲವರಿಗೆ ಮಾತ್ರ ವಿಷಯ ಬಲ ಅಧಿಕವಾಗಿರುವುದರಿಂದ ಅಲ್ಲಿಗೆ ನಿಂತು ಹೋಗದೇ ಇನ್ನೂ ವಿಷಯಗಳು ತಲೆಯಲ್ಲಿ ಇರಬಹುದು. ಅಂತಹವರು ಕೊನೆಗೆ ಗರ್ಭಗುಡಿ ಮುಂದೆ ಇರುವ ಗಂಟೆಯ ಹತ್ತಿರ ಇಲ್ಲದಂತೆ ಮಾಡಿಕೊಳ್ಳಬಲ್ಲರು. ಮಾಯಾ ಬಲದಿಂದ ಕಡಿಮೆಯಾಗದ ಆಲೋಚನೆಗಳಿದ್ದರೂ ಕೊನೆಗೆ ಅವೂ ಸಹ ತೊಲಗಿ ಹೋಗಿ ನಿರ್ಮಲವಾದ ಮನಸ್ಸು ದೇವರಲ್ಲಿ ಮಗ್ನವಾಗುವಂತೆ ಮಾಡಲು ಗಂಟೆಯನ್ನಿರಿಸಿದ್ದಾರೆ. ಗಂಟೆಯ ಅಲೆಯ ಮೂಲಕ ಧ್ವಜ ಸ್ಥಂಭದ ಬಳಿಯಾಗಲಿ ಮನಸ್ಸಿನ ನಿಲುಗಡೆ ತಪ್ಪದೇ ಉಂಟಾಗುತ್ತದೆ.

# 9. ಗಂಟೆ

ಪ್ರತಿ ದೇವಾಲಯದಲ್ಲಿಯೂ ಮೂಲ ಪ್ರತಿಮೆಯ ಮುಂದೆ ಒಂದು ಗಂಟೆಯನ್ನು ನೇತಾಡುವಂತೆ ಕಟ್ಟಿರುತ್ತಾರೆ. ಆಲಯದೊಳಗೆ ಪ್ರವೇಶಿಸಿದ ಭಕ್ತರು ಅಂದರೆ (ಆಸ್ತಿಕರು) ಮೊದಲು ಗಂಟೆ ಹೊಡೆಯುವ ಸಂಪ್ರದಾಯವಿದೆ. ಸಾಮಾನ್ಯವಾಗಿ ಗಂಟೆ ಬಾರಿಸದೆಯೇ ದೇವರಿಗೆ ನಮಸ್ಕರಿಸುವುದಿಲ್ಲ. ಕೆಲವರು ಕುಳ್ಳರಾಗಿದ್ದರು ಮೇಲಕ್ಕೆ ಎಗರಿ ಶ್ರಮ ಬಿದ್ದಾದರೂ ಗಂಟೆಯನ್ನು ಬಾರಿಸಿ

ನಮಸ್ಕರಿಸುವುದು ಅಭ್ಯಾಸವಾಗಿದೆ. ಹಾಗೆ ಏತಕ್ಕಾಗಿ ಗಂಟೆ ಬಾರಿಸಬೇಕೆಂದು ಪ್ರಶ್ನಿಸಿದರೆ ಇದು ಪದ್ಧತಿ ಎಂದು ಹೇಳುತ್ತಿದ್ದಾರೆ. ಆದರೆ ಯಾವ ಭಕ್ತನೂ ವಿವರಿಸಿ ಹೇಳಲಾರದೆಹೋಗುತ್ತಿದ್ದಾರೆ. ಭಕ್ತರು ಕುರಿಗಳ ದಾಂಧಲೆಯಂತೆ ಒಬ್ಬರು ಮಾಡುವ ಕೆಲಸವನ್ನು ವಿವರಿಸಿಕೊಳ್ಳದೇ ಮತ್ತೊಬ್ಬರು ಮಾಡುತ್ತಿದ್ದಾರೆಂದು, ಒಂದುವೇಳೆ ಆಲಯದಲ್ಲಿ ಪೂಜೆ ಮಾಡುವವರಿಗಾದರೂ ಈ ವಿಷಯ ತಿಳಿದಿರುತ್ತದೆಂಬ ಉದ್ದೇಶದಿಂದ ಅವರನ್ನು ಪ್ರಶ್ನಿಸಿದರ "ದೇವರು ನಿದ್ರಾವಸ್ತೆಯಲ್ಲಿರುತ್ತಾನೆ. ಗಂಟಾನಾದ ಕೇಳಿ ಭಕ್ತನು ಬಂದಿದ್ದಾನೆಂದು ಎಚ್ಚರವಾಗುತ್ತಾನೆ" ಎಂದು ಹೇಳುತ್ತಿದ್ದಾರೆ. ಹಾಗಾದರೆ ದೇವರು ಎಚ್ಚರಗೊಳ್ಳಲು ಒಬ್ಬ ಭಕ್ತನು ಬಾರಿಸಿದ ಗಂಟಾನಾದ ಸಾಕಲ್ಲವೆ! ಹಿಂದೆಯೇ ಬಂದಿರುವ ಭಕ್ತನು ಏತಕ್ಕಾಗಿ ಬಾರಿಸಬೇಕು. ಒಬ್ಬ ಭಕ್ತನನ್ನು ನೋಡಿದ ಕೂಡಲೇ ಎರಡನೆಯವನನ್ನು ನೋಡದೇ ನಿದ್ರೆಯೊಳಗೆ ಜಾರಿಕೊಳ್ಳುವವನಾ ದೇವರು? ಎಂದು ಕೇಳಿದ್ದಕ್ಕೆ ವಿವರಿಸಿ ಹೇಳಲಾಗದೇ ಸಮಂಜಸವಾದ ಪ್ರಶ್ನೆಗಳಲ್ಲ ವೆನ್ನುವವರಿದ್ದಾರೆ.

ಎಲ್ಲದಕ್ಕೂ ಅತೀತರಾದ ಯೋಗಿಗಳು, ದೇವಾಲಯಗಳಲ್ಲಿ ಅದ್ಭುತಗಳಾದ ಅರ್ಥಕೊಡುವ ಆತ್ಮಜ್ಞಾನವನ್ನು ತಿಳಿಸಿದ ಅವರು, ಗಂಟಾ ತರಂಗಗಳನ್ನು ಕುರಿತು ಮೊದಲೇ ಧ್ವಜಸ್ಥಂಭದ ಬಳಿ ತಿಳಿಸಿದ್ದಾರೆ. ಗಂಟಾನಾದ ವಿಷಯಗಳ ಅಲೆ ಎಂದು ತಿಳಿಸಿದ್ದಾರೆ. ಮಾನವನು ದೇವಾಲಯದ ಒಳಗಡೆ ಬಾರದ ಮುನ್ನವೇ ಅನೇಕ ವಿಷಯಗಳಿಂದ ತುಂಬಿರುತ್ತಾನೆ. ಅಂತಹವನು ಎಲ್ಲಾ ವಿಷಯ ಜ್ಞಾಪಕಗಳನ್ನು ತೊರೆದು ಒಂದು ಕ್ಷಣವಾದರೂ ಆಲಯದೊಳಗಿನ ಪ್ರತಿಮೆಯ ಮೇಲೆ ಮನಸ್ಸು ನಿಲ್ಲಿಸಬೇಕೆಂಬ ಉದ್ದೇಶದಿಂದಲೇ ಗಂಟೆಯನ್ನು ಪ್ರತಿಮೆಯ ಮುಂದೆ ಇಟ್ಟಿದ್ದಾರೆ. ಒಂದುಬಾರಿ ಗುಡಿಯಲ್ಲಿ ಗಂಟೆ ಬಾರಿಸಿ ಗಂಟಾನಾದ ಕೇಳಿರಿ. ಟಂಗ್.ಗ್...ಗ್...ಗ್...ಗ್ ಎಂದು ದೀರ್ಘವಾಗಿ ಏಕದಾಟಿಯಾಗಿರುವ ನಾದ ಕೇಳಿಸುತ್ತದೆ. ಪೂರ್ವದಲ್ಲಿ ಭಕ್ತರು ಆ ವಿಧವಾಗಿ ಗಂಟೆ ಬಾರಿಸಿ ಆ ಗಂಟಾ ನಾದದ ಮೇಲೆ ಮನೋ ದೃಷ್ಟಿಯನ್ನಿಟ್ಟು ಕೇಳಿಸಿಕೊಳ್ಳುತ್ತಿದ್ದರಂತೆ ಹಾಗೆ ಕೇಳಿಸಿಕೊಳ್ಳುತ್ತಿದ್ದುದರಿಂದ ಕೋತಿಯ ಹಾಗೆ ಅನೇಕ



**ಗಂಟ**

ವಿಷಯಗಳ ಮೇಲೆ ತಿರುಗುತ್ತಿರುವ ಮನಸ್ಸು ಆ ನಾದದಲ್ಲಿ ಐಕ್ಯವಾಗಿ ನಾದ ಏಕದಾಟಿಯಾಗಿ ಬರುವಂತೆ ಮನಸ್ಸೂ ಸಹ ಏಕದಾಟಿಗೆ ಬರುತ್ತಿತ್ತು. ನಾದ ಏಕದಾಟಿಯಾಗಿ ಹೊರಹೊಮ್ಮಿ ಕೇಳಿಸದೇ ಹೋದಂತೆ ಮನಸ್ಸು ಸಹ ಒಂದೇ ದಾಟಿಯಲ್ಲಿ ನಿಂತು ಚಲಿಸದಂತಾಗುವುದು. ಆ ಸಮಯದಲ್ಲಿ ಒಂದು ಕ್ಷಣವಾದರೂ ಮನೋ ನಿಗ್ರಹದಿಂದ ಪ್ರತಿಮೆಯ ಮೇಲೆ ದೃಷ್ಟಿ ನಿಲ್ಲಿಸುವುದು ಒಳ್ಳೆಯದೆಂದು ಪೂರ್ವದ ಯೋಗಿಗಳ ಭಾವನೆಯಾಗಿತ್ತು.

ಈದಿನ ಒಂದು ಬಾರಿಅಲ್ಲದೆ ಢಣ ಢಣವೆಂದು ಅನೇಕ ಸಲ ಬಾರಿಸುವ ಗಂಟೆಗೆ ಯಾವ ಅರ್ಥವಿಲ್ಲ. ಏಕೆ ಬಾರಿಸುತ್ತಿದ್ದೇವೆಂದು ತಿಳಿದುಕೊಳ್ಳದೆಯೇ ಮುಂದಿರುವವನು ಹೊಡೆದಿದ್ದಾನಲ್ಲ! ಹಿಂಬದಿಯಲ್ಲಿರುವ ನಾನು ಹೊಡೆಯಬೇಕೆಂಬುದೇ ಉದ್ದೇಶದ ಹೊರತು! ಗಂಟಾನಾದ ಮನೋ ನಿಶ್ಚಲತೆಗೆಂದು ತಿಳಿದುಕೊಳ್ಳಲಾಗದೇ ಹೋಗುತ್ತಿದ್ದಾರೆ. ಮನೋನಿಶ್ಚಲತೆಯಿಲ್ಲದ ಪೂಜೆಗಳು ವ್ಯರ್ಥ. ಆದ್ದರಿಂದ ಒಂದು ಸಲ ಗಂಟೆಯನ್ನು ಹೊಡೆಯಿರಿ, ಆ ನಾದದಲ್ಲಿ ಮನಸ್ಸನ್ನು ಇರಿಸಿರಿ. ನಾದದ ದಾಟಿಯಲ್ಲಿ ಮನಸ್ಸನ್ನು ಒಂದು ಸಲ ನಿಲ್ಲಿಸದೇ ಹೊರಗಿನ ವಿಷಯಗಳೇ ಜ್ಞಾಪಕಕ್ಕೆ ಬರುತ್ತಿದ್ದರೂ ಎರಡನೆಯ ಸಲ ಗಂಟೆ ಹೊಡೆದು ನಾದ ಮುಗಿಯುವ ತನಕ ಕೇಳಿ ಮನೋ ಚಂಚಲವನ್ನು ನಿಲ್ಲಿಸಿ

ಪೂಜೆ ಮಾಡಿದರೆ ಪ್ರಯೋಜನವಿರುತ್ತದೆ. ಹಾಗಲ್ಲದೆ ಗುಡಿಗೆ ಉಲ್ಲಾಸಕ್ಕಾಗಿ ಹೋಗಿ, ಉಲ್ಲಾಸಕ್ಕಾಗಿ ಗಂಟೆ ಬಾರಿಸಿದರೆ ಪೂಜೆಯೂ ಸಹ ಉಲ್ಲಾಸವಾಗಿರುತ್ತದೆ ಹೊರತು ಸಾರಾಂಶವಾಗಿ ಇರುವುದಿಲ್ಲವೆಂದು ಗ್ರಹಿಸಬೇಕು.

# 10. ಸಿಂಹದ ತಲೆ (ಪ್ರಭಾವಳಿ)

ಗೋಪುರ ದಾಟಿದ ನಂತರ ಧ್ವಜಸ್ಥಂಭ, ಧ್ವಜಸ್ಥಂಭವನ್ನು ಅರ್ಥ ಮಾಡಿಕೊಂಡು ದಾಟಿದ ನಂತರ ಗರ್ಭಗುಡಿಯ ಮುಂದೆ ಗಂಟೆ, ಗಂಟೆಯನ್ನು ದಾಟಿ ಸ್ವಲ್ಪ ಮುಂದಕ್ಕೆ ಬರಲು ಏಳನೆಯ ದ್ವಾರದ ಒಳಗಡೆ ದೈವ ಪ್ರತಿಮೆ ಇರುತ್ತದೆ. ಪ್ರತಿಮೆ ಯಾವ ರೂಪದಲ್ಲಿ ಇದ್ದರು ಅದನ್ನೇ ಆ ಗುಡಿಯ ಮೂಲ ವಿರಾಟ್ ಎನ್ನುತ್ತಾರೆ. ಆಕಾರವಿಲ್ಲದ ದೈವವನ್ನು ಆಕಾರವಿರುವ ಪ್ರತಿಮೆಯಾಗಿ ಗರ್ಭಗುಡಿಯಲ್ಲಿ ಇಡುವುದೇಕೆಂದು ಇತರೆ ಮತದವರಿಗೆ ಅನುಮಾನ ಬರಬಹುದು. ಅದಕ್ಕೆ ಸಮಾಧಾನವೇನೆಂದರೆ! ಅಣು ಅಣುವಿನಲ್ಲೂ ವ್ಯಾಪಿಸಿಕೊಂಡಿರುವ ಆಕಾರವಿಲ್ಲದವನು ಪರಮಾತ್ಮ. ಎಲ್ಲಾಕಡೆ ವ್ಯಾಪಿಸಿ ಕೊಂಡಿರುವ ಪರಮಾತ್ಮನನ್ನು ಇಂದೂ ಮತದಲ್ಲಿ **"ಪುರುಷೋತ್ತಮ"**ನೆಂದು ಅಥವಾ ಪರಮಾತ್ಮನೆಂದು, ಇಸ್ಲಾಂ ಮತದಲ್ಲಿ **"ಅಲ್ಲಾ"** ಎಂದು, ಕ್ರೈಸ್ತ ಮತದಲ್ಲಿ **"ಯೆಹೋವಾ"** ಎಂದು ಹೇಳುವುದು ವಾಡಿಕೆಯಲ್ಲಿದೆ. ಯಾರು ಹೇಗೆ ಕರೆದರೂ ಒಬ್ಬನನ್ನೇ. ಅಂತಹವನನ್ನು ತಿಳಿಸಬೇಕೆಂದರೆ ಯಾವುದೋ ಒಂದು ಪದ್ಧತಿಯಿಂದ ತಿಳಿಸಬೇಕೆಂಬ ಉದ್ದೇಶದಿಂದ ದೇವಾಲಯಗಳ ಸೃಷ್ಟೀ ಕರಣ ನಡೆದಿದೆ. ದೇವರು ನಿರಾಕಾರ ನೆನ್ನುವುದಕ್ಕೆ ಆಕಾರವಿಲ್ಲದ ಅಂದರೆ ಮೂಗು ಮುಖ ಕಣ್ಣುಗಳು ಮೊದಲಾದ ಶರೀರಾಕೃತಿಯಿಲ್ಲದ ಕಲ್ಲು ಗುಂಡನ್ನು ತೋರಿಸಿದ್ದಾರೆ. ಶರೀರಾಕಾರವಿಲ್ಲದ ಲಿಂಗವನ್ನು ಕೆಲವು ಆಲಯಗಳಲ್ಲಿ ಇಟ್ಟರೆ, ಕೆಲವು ಗುಡಿಗಳಲ್ಲಿ ಮಾತ್ರ ಆಕಾರವಿರುವ ಪ್ರತಿಮೆಗಳನ್ನಿಟ್ಟಿದ್ದಾರೆ. ಉದಾಹರಣೆಗೆ ತಿರುಪತಿ ವೆಂಕಟೇಶ್ವರಸ್ವಾಮಿಯನ್ನು ತೆಗೆದುಕೊಳ್ಳೋಣ. ಅಲ್ಲಿ ಆಕಾರವಿರುವ

 

***ಸಿಂಹದ ತಲೆ (ಪ್ತಭಾವಳಿ)***

ಪ್ರತಿಮೆಯನ್ನಿಟ್ಟಿದ್ದಾರೆ. ದೇವರು ನಿರಾಕಾರನೆಂಬುವುದಕ್ಕೆ ಲಿಂಗವನ್ನಿರಿಸಲು ಅದೇ ದೇವರು ಆಗಾಗ ಸಾಕಾರ ರೂಪದಲ್ಲಿ ಬರುವನೆಂಬುವುದಕ್ಕೆ ಮಾನವನ ಆಕಾರದ ಪ್ರತಿಮೆಯನ್ನಿಟ್ಟಿದ್ದಾರೆ. ದೇವರು ರೂಪವಿಲ್ಲದವನಾಗಿದ್ದು ಧರ್ಮ ಪ್ರತಿಷ್ಠಾಪನೆಗಾಗಿ ತನ್ನನ್ನು ತಾನು ಸೃಷ್ಟಿಸಿಕೊಂಡು ಪರಮಾತ್ಮನ ಪ್ರತಿನಿಧಿಯಾಗಿ ಅಥವಾ ಪರಮಾತ್ಮನ ದೂತನಾಗಿ ಭೂಮಿಯ ಮೇಲೆ ಮಾನವ ಜನ್ಮ ಎತ್ತುತ್ತಿದ್ದಾನೆಂದು ಗೀತೆಯಲ್ಲಿಯೂ ಸಹ ಹೇಳಿದ್ದಾನೆ. ಅವದಿಗಳಿಲ್ಲದ ಪರಮಾತ್ಮನ ಸಮಾಚಾರ ತಂದಿದ್ದಾನೆ, ಆದ್ದರಿಂದ ಅಂತಹವನನ್ನು ಅವಧೂತನೆಂದು ಹೇಳುವುದೂ ಸಹ ನಡೆದಿದೆ. ಇದೇ ವಿಷಯವಾಗಿ ಇಸ್ಲಾಂ ಮತದಲ್ಲಿಯೂ ಸಹ ದೈವದೂತ (ಪೈಗಂಬರ್ ಅಥವಾ ಖಲೀಪ) ಎಂದಿದ್ದಾರೆ. ಪರಮಾತ್ಮನನ್ನು ದೇವಾಲಯದಲ್ಲಿ ನಿರಾಕಾರವಾಗಿ ತೋರಿಸಲು ಲಿಂಗವನ್ನು, ಸಾಕಾರವಾಗಿ ತೋರಿಸಲು ಪ್ರತಿಮೆಯನ್ನು ನಿರ್ಮಿಸಿದ್ದಾರೆ. ಪ್ರತಿಮೆಯಿರುವ ತಿರುಪತಿ ವೆಂಕಟೇಶ್ವರಾಲಯದಲ್ಲಿ ವೆಂಕಟೇಶ್ವರನ ಪ್ರತಿಮೆಯಸುತ್ತಲೂ ಕಿರೀಟದ ಮೇಲ್ಭಾಗದಿಂದ ಪಕ್ಕೆದವರೆಗೂ ಸಿಂಹದ ತಲೆಯನ್ನಿಟ್ಟಿದ್ದಾರೆ. ಕಿರೀಟದ ಮೇಲ್ಭಾಗದಿಂದ ಸಿಂಹದ ತಲೆಯ ಆಕೃತಿಯನ್ನು ಬೋಳು ಆಕಾರವಿದ್ದು ಅದು ಎಡಬಲ ಪಕ್ಕೆಗಳವರೆಗೂ ವ್ಯಾಪಿಸಿಕೊಂಡಿದೆ.

ಹಾಗೆ ಇರುವುದರಲ್ಲಿ ಅರ್ಥವೇನೆಂದರೆ! ಆಕಾರ ಹೊಂದಿರುವ ಭಗವಂತನು ಸಹ ಮಾಯೆ ಆವರಣದಲ್ಲಿಯೇ ಇದ್ದಾನೆಂದು ತಿಳಿದುಬರುತ್ತಿದೆ. ಅಂತಹ ಭಗವಂತನನ್ನು ತಿಳಿಯಬೇಕೆಂದರೆ ಆತನ ಸುತ್ತಲೂ ಆವರಿಸಿ ಕೊಂಡಿರುವ ಮಾಯೆ (ಸೈತಾನ್ ಅಥವಾ ಸಾತಾನ್) ಎಂದು ತಿಳಿದು ಅದನ್ನು ದಾಟಬೇಕಾಗಿದೆ. ಆತನ ಸುತ್ತ ಇರುವ ಮಾಯೆಯನ್ನು ದಾಟದೇ ಹೋದರೆ ಅವಧೂತನಾಗಿ ಬಂದಿರುವವನು ಸಾಧಾರಣ ಮಾನವನಾಗಿಯೇ ಕಾಣಿಸುತ್ತಾನೆ. ಆತನು ಮಾಯೆಯನ್ನು ಗುರುತಿಸಿ ದಾಟಿದರೆ ಬಂದವನು ಭಗವಂತನೇ ಎಂದು ತಿಳಿಯುತ್ತದೆ. ಹಾಗೆ ಗುರುತಿಸಲಾಗದೇ ಎಷ್ಟೋಬಾರಿ ಮಾಯೆಯಲ್ಲಿಯೇ ಸಿಲುಕಿಕೊಂಡಿದ್ದೇವೆ. ನಾನು ಬಂದಾಗ ನೀವು ನನ್ನನ್ನು ಗುರುತಿಸಲಿಲ್ಲವೆಂದು ನಂತರ ಬಂದಾಗಲೂ ಸಹ ಗುರುತಿಸಲಾರರು ಎಂದು ಪರಮಾತ್ಮ ತಿಳಿಸಿದ್ದಾನೆ. ಹೆಚ್ಚಿನ ಬಲವನ್ನು ಮೃಗ ಬಲ ಎನ್ನುತ್ತಾರೆ. ಮಾನವನಿಗಿಂತ ಮೃಗಕ್ಕೆ ಹೆಚ್ಚು ಬಲವಿರುತ್ತದೆ, ಆದ್ದರಿಂದ ಕೈಲಾಗದಿರುವಾಗ ಎದುರಿಗಿರುವವನದು ಮೃಗ ಬಲ ಎನ್ನುತ್ತೇವೆ. ಮೃಗಗಳಿಗೆಲ್ಲಾ ರಾಜ ಸಿಂಹ. ಮಾಯೆಗೆ ಹೆಚ್ಚು ಬಲವಿರುವುದು ಆದ್ದರಿಂದ ಅದನ್ನು ಸಿಂಹದೊಂದಿಗೆ ಹೋಲಿಸಿದ್ದಾರೆ. ದೇವರ ಕಡೆ ಹೋಗಬೇಕೆನ್ನುವವನ ಪ್ರಯತ್ನವನ್ನು ಹೆಚ್ಚು ಬಲಹೊಂದಿ ವಿಘ್ನ ಮಾಡುತ್ತದೆ ಮಾಯೆ. ಅಂತಹ ಮಾಯೆಯನ್ನು ಜಯಿಸುವುದು ಬಹಳ ಕಷ್ಟವೆಂದು ಗೀತೆಯೊಳಗೂ ಸಹ ಹೇಳಿದ್ದಾರೆ. ಆ ವಿಷಯ ತಿಳಿಸುವ ಸಲುವಾಗಿ ದೇವರೆಂಬ ಭಾವನೆಯಿರುವ ವೆಂಕಟೇಶ್ವರನ ಪ್ರತಿಮೆಯ ಸುತ್ತಲೂ ಪ್ರಭಾವಳಿಯನ್ನಿರಿಸಿದ್ದಾರೆ. ಸಿಂಹಬಲವಿರುವ ಮಾಯೆ ನಿನ್ನ ತಲೆಯಲ್ಲಿ ಯೋಚನೆಯ ರೂಪದಲ್ಲಿ, ಹೊರಗೆ ಗಂಡ ಹೆಂಡತಿ ಬಂಧುಗಳ ರೂಪದಲ್ಲಿ, ಅನೇಕ ಕಾರ್ಯರೂಪಗಳಲ್ಲಿ ಹೇಗಾದರೂ ಇರಬಹುದು. ಪ್ರಭಾವಳಿಯಲ್ಲಿ ತೋರಿಸಿರುವ ಮಾಯೆಯನ್ನು ಜಯಿಸುವುದು ಕಷ್ಟವೇ ಆದರೂ ನಮ್ಮ ಪ್ರಯತ್ನ ಬಿಡಬಾರದು. ಸಿಂಹದ ಎದುರು ನಿಂತು ಬಲವನ್ನುಪಯೋಗಿಸಿ ಜಯಿಸಲಾರೆವು. ಬುದ್ಧಿ ಬಲವನ್ನುಪ ಯೋಗಿಸಿ ಎಷ್ಟು ದೊಡ್ಡಸಿಂಹವನ್ನಾದರೂ ಎಷ್ಟು ಸಿಂಹಗಳನ್ನಾದರೂ ನಮ್ಮ

ಅಧೀನದಲ್ಲಿರುವಂತೆ ನಮ್ಮ ಮಾತು ಕೇಳುವಂತೆ ಮಾಡಿಕೊಳ್ಳಬಹುದು. ಹಾಗೆಯೇ ಮಾಯೆಯೆಂಬ ಸಿಂಹವನ್ನು ಶ್ರದ್ಧೆ ಜ್ಞಾನವೆಂಬ ಬುದ್ಧಿಯಿಂದ ಜಯಿಸಬಹುದು. ಮಾಯೆಯನ್ನು ಜಯಿಸದೇ ದೇವರು ತಿಳಿಯಲಾರನೆಂದು ತಿಳಿಸುವ ಉದ್ದೇಶದಿಂದ ದೇವಾಲಯಗಳಲ್ಲಿ ಪ್ರಭಾವಳಿಯನ್ನಿಟ್ಟಿದ್ದಾರೆಂದು ತಿಳಿಯಬೇಕು.

# 11. ಗರ್ಭಗುಡಿ

ದೇವಾಲಯದಲ್ಲಿ ಮೂಲ ವಿರಾಟ್ ಪ್ರತಿಮೆ ಇರುವುದನ್ನು ಗರ್ಭಗುಡಿ ಎನ್ನುತ್ತೇವೆ. ಗರ್ಭದಿಂದ ಸಜೀವವಾಗಿ ಜನ್ಮಿಸುವವನು ಭಗವಂತನು. ಪ್ರಪಂಚದಲ್ಲಿ ಒಬ್ಬ ಭಗವಂತನಲ್ಲದೇ ಯಾವ ಮನುಷ್ಯನೂ ತಾಯಿ ಗರ್ಭದಿಂದ ಸಜೀವವಾಗಿ ಹುಟ್ಟಲಾರ. ಎಲ್ಲ ಕಡೆಯೂ ವ್ಯಾಪಿಸಿಕೊಂಡಿರುವ ಪರಮಾತ್ಮ ತಾಯಿ ಗರ್ಭದಿಂದ ಸಜೀವನಾಗಿ ಹುಟ್ಟುತ್ತಿದ್ದಾನೆ. ಒಂದು ಕಡೆಯಿರುವ ಜೀವಾತ್ಮ ತಾಯಿ ಗರ್ಭದಿಂದ ಹೊರಗೆ ಬಂದ ಶರೀರದಲ್ಲಿ ಮಾತ್ರ ಸೇರುತ್ತಿದ್ದಾನೆ. ಮನುಷ್ಯ ಭಗವಂತನು ಒಂದೇ ರೀತಿ ಕಾಣಿಸುತ್ತಿದ್ದರೂ ಹುಟ್ಟಿನಲ್ಲಿಯೇ ಎಷ್ಟೋ ಭೇದವಿದೆ ಎಂದು, ನಮ್ಮಂತೆ ಕರ್ಮಬದ್ಧನಾಗಿ ಹುಟ್ಟುವುದಿಲ್ಲವೆಂದು, ತಾಯಿ ಶರೀರದಲ್ಲಿಯೂ ಸಹ ಅಣುಅಣುವಿನಲ್ಲಿ ವ್ಯಾಪಿಸಿಕೊಂಡಿರುವವನು ತಾಯಿ ಶರೀರದಿಂದಲೇ ಸಜೀವವಾಗಿ ಹುಟ್ಟುತ್ತಾನೆಂದು ತಿಳಿಸುವ ಅರ್ಥದಿಂದಲೇ ಆತನನ್ನು ಭಗವಂತ ಎಂದಿದ್ದೇವೆ. ಆದ್ದರಿಂದಲೇ ಭಗವಂತನ ಗುರುತಿಗಾಗಿ ನಿರ್ಮಿಸಿರುವ ಆಲಯಗಳಲ್ಲಿ ದೇವರ ಪ್ರತಿಮೆ ಇರುವ ಸ್ಥಳವನ್ನು ಗರ್ಭಗುಡಿ ಎನ್ನುತ್ತಿದ್ದೇವೆ. ಗರ್ಭಗುಡಿಯಲ್ಲಿ ಗರ್ಭದಿಂದ ಎಂದರೆ ಭಗದಿಂದ ಹುಟ್ಟಿದ ಭಗವಂತನಿದ್ದಾನೆಂದು ಅರ್ಥ. ಎಲ್ಲಿಯಾದರೂ ಆಕಾರವಿರುವ ಪ್ರತಿಮೆ ಇರುವುದನ್ನೇ ಗರ್ಭಗುಡಿ ಎನ್ನಬೇಕು. ಮೂಗು, ಮುಖ ಆಕಾರವಿಲ್ಲದ ಲಿಂಗವಿರುವ ಆಲಯದಲ್ಲಿ ಲಿಂಗವಿರುವ ಸ್ಥಳವನ್ನು ಗರ್ಭಗುಡಿ ಎನ್ನಬಾರದು.

ಏಕೆಂದರೆ ಪರಮಾತ್ಮ ಗುರುತು ಇರುವವನಲ್ಲ, ಹುಟ್ಟುವವನಲ್ಲ. ನಿರಾಕಾರ ಸ್ವರೂಪವನ್ನು ತಿಳಿಸುವ ಲಿಂಗವಿರುವ ಸ್ಥಳವನ್ನು ಗರ್ಭಗುಡಿ ಎನ್ನುವುದು ಬಹಳ ತಪ್ಪಾಗುತ್ತದೆ ಮತ್ತು ಸಂಪ್ರದಾಯ ವಿರುದ್ಧವೆಂದು ತಿಳಿಯಬೇಕು. ಲಿಂಗಕ್ಕೆ ಪ್ರಭಾವಳಿ ಇರಬಾರದು. ಹಾಗೆಯೇ ಲಿಂಗವಿರುವ ಸ್ಥಳವನ್ನು ಗರ್ಭಗುಡಿ ಎನ್ನಬಾರದು. ಆಕಾರಪ್ರತಿಮೆ ಇರುವ ಸ್ಥಳವನ್ನು ಗರ್ಭಗುಡಿ ಎನ್ನಬೇಕು. ಹಾಗೆಯೇ ಪ್ರತಿಮೆಯ ಆಕಾರಕ್ಕೆ ತಪ್ಪದೇ ಪ್ರಭಾವಳಿ ಇರಬೇಕು. ಪರಮಾತ್ಮನ ಅಂಶ ಭೂಮಿಯ ಮೇಲೆ ಅವತರಿಸಿದರೂ ಪರಮಾತ್ಮ ಅಣುಅಣುವಿನಲ್ಲೂ ವ್ಯಾಪಿಸಿಕೊಂಡಿದ್ದಾನೆ. ಹುಟ್ಟಿದ ಆಕಾರಕ್ಕೆ ಎಂದರೆ ಭಗವಂತನಿಗೆ ತಾಯಿ ಗರ್ಭವಿರುತ್ತದೆ. ನಿರಾಕಾರನಾದ ಪರಮಾತ್ಮನಿಗೆ ತಾಯಿ ಗರ್ಭವಿರುವುದಿಲ್ಲ, ಆತನಿಗೆ ಹುಟ್ಟು ಇರುವುದಿಲ್ಲ. ಆದ್ದರಿಂದ ಆಕಾರವಿರುವ ಭಗವಂತನ ರೂಪಕ್ಕೆ ಸಮನಾಗಿರುವ ರಂಗ ದೇವಾಲಯವನ್ನು ಗರ್ಭಗುಡಿ ಎಂದು ಹೇಳಬಹುದು. ಆಕಾರವಿಲ್ಲದ ಪರಮಾತ್ಮನಿಗೆ ಸಮನಾಗಿರುವ ಲಿಂಗವಿರುವ ಆಲಯವನ್ನು ಗರ್ಭಗುಡಿ ಎನ್ನಬಾರದು. ಹಾಗೆಯೇ ಆಕಾರವಿರುವ ಭಗವಂತ ಮಾಯೆಯಲ್ಲಿ ಸಿಲುಕಿ ತಿರುಗುವವನಾಗಿರುತ್ತಾನೆ ಆದ್ದರಿಂದ ಮಾಯೆಗೆ ಸಮನಾದ ಪ್ರಭಾವಳಿಯನ್ನು ಆಕಾರವಿರುವ ಪ್ರತಿಮೆಗೆ ಇಡಬೇಕು. ಆಕಾರವಿಲ್ಲದ ಪರಮಾತ್ಮ ಮಾಯೆಯಲ್ಲಿ ಸಿಲುಕಿಕೊಂಡಿರುವುದಿಲ್ಲ ಆದ್ದರಿಂದ ಪರಮಾತ್ಮನ ಸೂಚನೆಯಾದ ಲಿಂಗಕ್ಕೆ ಪ್ರಭಾವಳಿಯನ್ನು ಇಡಬಾರದು. ಆಕಾರವಿರುವ ಭಗವಂತನಿಗೇ ಆಯುಧಗಳು ಅಗತ್ಯ. ಆಕಾರವಿಲ್ಲದ ದೇವರಿಗೆ (ಪರಮಾತ್ಮನಿಗೆ) ಆಯುಧಗಳು ಅಗತ್ಯವಿಲ್ಲ, ಆತನೇ ಆಯುಧಗಳಲ್ಲಿ ವ್ಯಾಪಿಸಿರುವವನು ಆದ್ದರಿಂದ ಲಿಂಗದ ಹತ್ತಿರ ಆಯುಧಗಳು ಇರುವುದಿಲ್ಲ ಮತ್ತು ಇಡಬಾರದು. ಆಕಾರವಿರುವ ಪ್ರತಿಮೆಗೆ ಮಾತ್ರವೇ ಆಯುಧಗಳನ್ನಿಡಬೇಕು.

# 12. ಶಂಖು ಚಕ್ರಗಳು

ತಿರುಪತಿ ಮೊದಲಾದ ದೇವಸ್ಥಾನಗಳಲ್ಲಿ ಶಂಖು ಚಕ್ರ ನಾಮಗಳು ಮಾತ್ರವೇ ಪ್ರತಿಷ್ಠಾಪನೆ ಮಾಡಿ ಇಟ್ಟಿರುವುದು ಗಮನಾರ್ಹ. ತಮಿಳುನಾಡಿನಲ್ಲಿ ಕೆಲವು ದೇವಾಲಯಗಳ ಪ್ರಾಂಗಣಗಳ ಮೇಲೆ ಶಂಖು ಚಕ್ರ ನಾಮ ದರ್ಶನಗಳು ಇವೆ. ಹಾಗೆಯೇ ದೇವತಾ ಪಠಗಳಾಗಿ ಶಂಖು ಚಕ್ರ ನಾಮಗಳಿರುವ ಚಿತ್ರಗಳು ಸಹ ಇವೆ. ಎಲ್ಲಕ್ಕಿಂತಲೂ ತಿರುಪತಿ ತಿರುಮಲದಲ್ಲಿಯೇ ಹೆಚ್ಚಾಗಿ ಶಂಖು ಚಕ್ರ ನಾಮಗಳ ದರ್ಶನವಿದೆ. ಹಾಗೆಯೇ ನಾಮಗಳಿರುವ ದೇವತೆಗಳ ಕೈಗಳಲ್ಲಿಯೂ ಸಹ ಶಂಖು ಚಕ್ರಗಳಿವೆ. ದೇವಾಲಯದಲ್ಲಿನ ಪ್ರತಿಯೊಂದು ಆತ್ಮ ಜ್ಞಾನಾರ್ಥವೇ ಆಗಿರುವಾಗ ಶಂಖು ಚಕ್ರ ನಾಮಗಳಿಗೂ ಸಹ ವಿಶೇಷಾರ್ಥವೇ ಇರುತ್ತದೆ. ಅದು ಏನೆಂದರೆ !

ಒಂದು ಯುದ್ಧ ನಡೆಯಲಿದೆ ಎಂದುಕೊಳ್ಳಿ, ಅಲ್ಲಿ ಮೊದಲು ಅರಚುವುದು, ಕೇಕೆ ಹಾಕುವುದು, ಶಂಖಾನಾದಗಳು, ಡೋಲುಗಳ ಬಡಿತಗಳು ಮೊದಲಾದ ದೊಡ್ಡ ಕೋಲಾಹಲ ಏರ್ಪಡುತ್ತದೆ. ನಂತರ ನಾಶ ಏರ್ಪಡುತ್ತದೆ. ಹಾಗೆಯೇ ಕರ್ಮನಾಶಕ್ಕೆ ಯೋಗ ಸಾಧನೆ ಎಂಬ ಯುದ್ಧವು ಮಾಡಬೇಕಾಗುತ್ತದೆ. ಆ ಯೋಗ ಸಾಧನೆಯೆಂಬ ಯುದ್ಧವು ಶಬ್ಧವಿಲ್ಲದೇ ಪ್ರಾರಂಭವಾಗದು. ಗುರುವಿನಿಂದ ಹೊರಬರುವ ಜ್ಞಾನ ಬೋಧನೆಗಳೆಂಬ ಶಬ್ಧ ಮೊದಲು ಉಂಟಾಗಬೇಕು. ಜ್ಞಾನಬೋಧನೆ ಎಂಬ ಶಬ್ಧ ಶರೀರದಲ್ಲಿನ ಮನಸ್ಸಿಗೆ ಸೇರಿದ ನಂತರ ಯೋಗಸಾಧನೆ ಎಂಬ ಯುದ್ಧ ಪ್ರಾರಂಭವಾಗುತ್ತದೆ. ಸಣ್ಣ ಹೊಡೆ ದಾಟದಿಂದ ಪ್ರಾರಂಭವಾಗಿ ದೊಡ್ಡಯುದ್ಧಗಳವರೆಗೂ ಶಬ್ಧವಿಲ್ಲದೇ ನಡೆಯುವುದಿಲ್ಲವೆಂಬಂತೆ ಕರ್ಮ ಎಂಬ ಶತ್ರುವಿನ ಮೇಲೆ ಯೋಗ ಸಾಧನೆ ಎಂಬ ಯುದ್ಧವು ಜ್ಞಾನ ಶಬ್ಧವಿಲ್ಲದೇ ನಡೆಯುವುದಿಲ್ಲ. ಆದ್ದರಿಂದ ಜನ್ಮ ರಾಹಿತ್ಯಕ್ಕು, ಆತ್ಮ ದರ್ಶನಕ್ಕು ಮೊದಲು ಜ್ಞಾನದ ಅವಶ್ಯಕತೆ ನಂತರ ಯೋಗದ ಅವಶ್ಯವಿದೆ. ಜ್ಞಾನವಿಲ್ಲದೇ ಯೋಗ ಬರುವುದಿಲ್ಲ."ಶ್ರೇಯೋಹಿ ಜ್ಞಾನ ಮಭ್ಯಾಸಾತ್, ಜ್ಞಾನಧ್ಯಾನಂ ವಿಶಿಷ್ಯತೆ" ಎಂದು ಭಗವದ್ಗೀತೆಯೂ ಸಹ ಬೋಧಿಸುತ್ತಿದೆ.



**(ಶಂಖ ಚಕ್ರಗಳು)**

ಶಂಖದಿಂದ ಉದ್ಭವಿಸುವುದು ಶಬ್ಧ. ಜ್ಞಾನ ಶಬ್ಧದೊಂದಿಗೆ ಕೂಡಿಕೊಂಡಿದೆ. ಆದ್ದರಿಂದ ಜ್ಞಾನ ಮೊದಲು ಪ್ರತಿ ಮಾನವನಿಗೂ ಇರಬೇಕೆಂಬ ಉದ್ದೇಶದಿಂದ ನಾಮಕ್ಕೆ ಎಡಭಾಗದಲ್ಲಿ ಶಂಖವನ್ನಿರಿಸಿದ್ದಾರೆ. ಜ್ಞಾನದಿಂದ ಯೋಗಸಾಧನೆ ಮಾಡುವವನಿಗೆ ಯೋಗ ಲಭಿಸಿ ಕರ್ಮವನ್ನು ಸುಟ್ಟು ಹಾಕುತ್ತದೆ. ಆದ್ದರಿಂದ ಕರ್ಮ ನಾಶವಾಗುವುದಕ್ಕೆ ಚಕ್ರವನ್ನು ತೋರಿಸಿದ್ದಾರೆ. ಮೊದಲು ಜ್ಞಾನ ಶಬ್ಧವೆಂಬ ಶಂಖ ಶಬ್ಧ ಮಾಡಿ ನಂತರ ಯೋಗ ಸಾಧನೆಯೆಂಬ ಯುದ್ಧ ಮಾಡಿದರೂ ಯೋಗ ಶಕ್ತಿಯೆಂಬ ಚಕ್ರದಿಂದ ಕರ್ಮ ಎಂಬ ಶತ್ರುವು ನಶಿಸುತ್ತಾನೆಂಬ ಉದ್ದೇಶದಿಂದ ಬಲಭಾಗದಲ್ಲಿ ಚಕ್ರವನ್ನಿರಿಸಿದ್ದಾರೆ. ಜ್ಞಾನವಿಲ್ಲದೇ ಜ್ಞಾನಶಕ್ತಿಯಿರಲಾರದು. ಆದ್ದರಿಂದ ಶಂಖವಿಲ್ಲದೇ ಚಕ್ರವನ್ನು ಎಲ್ಲಿಯೂ ಇಡುವುದಿಲ್ಲ. ಎಲ್ಲಿಯಾದರೂ ಆಗಲಿ ಶಂಖ ಚಕ್ರಗಳ ಎರಡು ಗುರುತುಗಳಿರುತ್ತವೆ. ಈ ಎರಡೂ ಗುರುತುಗಳಿಗು ಮಧ್ಯ ನಾಮವಿರುತ್ತದೆ. ಹಾಗೆ ಇಲ್ಲದ ಪಕ್ಷದಲ್ಲಿ ನಾಮವಿರುವ ದೇವರಾದರೂ ಇರುತ್ತಾನೆ. ಈ ವಿಧವಾಗಿ ಶಂಖ ಚಕ್ರಗಳಿಗೆ ಮಧ್ಯದಲ್ಲಿ ನಾಮವಾಗಲೀ ಅಥವಾ ನಾಮವಿರುವ ದೇವರಾಗಲೀ ಇರುವ ಒಂದು ಕಾರಣವೇನೆಂದರೆ !

ಜ್ಞಾನವುಂಟಾಗಿ ಯೋಗ ಆಚರಿಸಿದವರಿಗೆ ಯೋಗಶಕ್ತಿ (ಜ್ಞಾನಶಕ್ತಿ) ಯಿಂದ ಕರ್ಮ ಸುಟ್ಟುಹೋಗುತ್ತದೆ. ಅಂತಹವನು ಮೋಕ್ಷ ಹೊಂದುತ್ತಾನೆ. ಆದ್ದರಿಂದ ಬ್ರಹ್ಮನಾಡಿಯಾಗಿ ಗುರುತುಹೊಂದಿದ ನಾಮವನ್ನು ಅಲ್ಲಿ ತೋರಿಸುವುದು ನಡೆದಿದೆ. ನಾಮದ ಮೇಲ್ಭಾಗದ ಒಂದು ಮೊನೆ ಶೂನ್ಯವನ್ನು ತೋರಿಸುತ್ತಿದೆ. ಆದ್ದರಿಂದ ಶಂಖು ಚಕ್ರಗಳನ್ನು ಹೊಂದಿರುವ ನಾನು ಮೋಕ್ಷ ದಲ್ಲಿದ್ದೇನೆಂದು ದೇವಾಲಯದ ಪ್ರತಿಮೆ ತೋರಿಸುತ್ತಿದೆ. ಹಾಗೆಯೇ ಜ್ಞಾನ ಯೋಗ ಶಕ್ತಿ ಉಂಟಾದವನು ಮೋಕ್ಷ ಹೊಂದುತ್ತಾನೆಂದು ಜ್ಞಾನದ ಚಿಹ್ನೆಯಾಗಿ ಶಂಖುವನ್ನು, ಮೋಕ್ಷ ಚಿಹ್ನೆಯಾಗಿ ನಾಮವನ್ನು, ಕರ್ಮ ನಾಶದ ಶಕ್ತಿ ಚಿಹ್ನೆಯಾಗಿ ಚಕ್ರವನ್ನು ತೋರಿಸುವುದು ನಡೆದಿದೆ. ದೊಡ್ಡವರು ಇಟ್ಟಿರುವ ಚಿಹ್ನೆಗಳಿರುವವು ಗಳಿಗೆ ಸಂಬಂಧಿಸಿದ ಆತ್ಮಜ್ಞಾನ ವಿವರಗಳು ಇಂದಿನ ದಿನಗಳಲ್ಲಿ ಇಲ್ಲದಾಗಿವೆ. ಆದ್ದರಿಂದ ಓದುಗರು ಚೆನ್ನಾಗಿ ಅರ್ಥಮಾಡಿಕೊಂಡು ಆಚರಿಸಬೇಕು.

# 13. ಆಯುಧಗಳು

ಒಂದು ಶಿವಾಲಯದ ಲಿಂಗಕ್ಕೆ ಹೊರತುಪಡಿಸಿ ರೂಪವಿರುವ ಎಲ್ಲ ದೇವತೆಗಳಿಗೂ ಆಯುಧಗಳಿರುವುದು ನೋಡಿದ್ದೇವೆ. ಅ ಆಯುಧಗಳೂ ಸಹ ಕೆಲವರಿಗೆ ಒಂದು, ಮತ್ತೆ ಕೆಲವರಿಗೆ ಎರಡರಿಂದ ಏಳು ಅಥವಾ ಎಂಟರವರೆಗೆ ಇರುವುದನ್ನು ನೋಡಿದ್ದೇವೆ. ದೇವತೆಗಳಿಗೆ ಆಯುಧಗಳಿಡುವು ದರಲ್ಲಿ ಅಂತರಾರ್ಥವೇನಿದೆ ಎನ್ನುವುದನ್ನು ಸಹ ನಾವು ತಿಳಿದುಕೊಳ್ಳಬೇಕಾಗಿದೆ. ವಾಯುವೆಂದರೆ ಗಾಳಿ, ನಮ್ಮ ಮೂಗಿನ ರಂಧ್ರಗಳಲ್ಲಿ ಆಡುತ್ತಿರುವ ಶ್ವಾಸ ವಾಯುವೇ ಅಂದರೆ ಗಾಳಿ. ಶ್ವಾಸಗಳ ಲೆಕ್ಕಾಚಾರದಿಂದಲೇ ನಾವು ಬದುಕುವ ಕಾಲವಿರುತ್ತದೆ. ಒಬ್ಬ ಮನುಷ್ಯ ಬದುಕಿರುವುದು ಶ್ವಾಸಗಳಿಂದ ಆದ್ದರಿಂದ ವಾಯುವೇ ಅವನ ಜೀವನದ ಅಳತೆ. ಆದ್ದರಿಂದ ಪೂರ್ವದಲ್ಲಿ ಜ್ಯೋತಿಷ್ಯದ ಪ್ರಕಾರ ಆತನ ಜೀವನ ಇಲ್ಲಿಯವರೆಗೂ ಇರುತ್ತದೆಂದು ಹೇಳುತ್ತ ಅವನ

ವಾಯುವು ಇಷ್ಟು ಇದೆ ಎಂದು ಹೇಳುತ್ತಿದ್ದರು. ಅದು ಕಾಲ ಕ್ರಮದಲ್ಲಿ ವಾಯುವು ಎಂಬ ಪದ ಆಯುವಾಗಿ ಬದಲಾಗಿದೆಯೆಂದು ಹಿಂದೆಯೂ ಸಹ ಹೇಳಿಕೊಂಡಿದ್ದೇವೆ. ಬದಲಾಗಿರುವ ಪದದ ಪ್ರಕಾರ ಆಯುವನ್ನು ಆಗಿ ಹೋಗುವಂತೆ ಮಾಡುವುದು ಆಯುಧ. ಆಯುವನ್ನು ಅನುಸರಿಸಿ ಹುಟ್ಟಿರುವುದು ಆಯುಧ ಎಂಬ ಪದ. ಅಂತಹ ಆಯುಧಗಳನ್ನು ದೇವತೆಗಳಿಗೆ ಅಲಂಕರಿಸುವುದರಲ್ಲಿ ಅಂತರಾರ್ಥ ಇದ್ದೇ ಇರುತ್ತದೆ. ಇದಕ್ಕು ಮುನ್ನ ಶಂಖು, ಚಕ್ರಗಳನ್ನು ಕುರಿತು ಹೇಳಿದಾಗ, ಚಕ್ರ ಕರ್ಮನಾಶ ಚಿಹ್ನೆವೆಂದು ತಿಳಿಸಿದ್ದೇವೆ.



*(ಆಯುಧಗಳು)*

ಹಾಗೆಯೇ ಇಲ್ಲಿಯೂ ಸಹ ಅನೇಕ ಆಯುಧಗಳನ್ನು ತೋರಿಸುವುದರಲ್ಲಿ ಸೂಕ್ಷ್ಮವಾಗಿದ್ದ ಅನೇಕ ವಿಧಗಳಾದ ಕರ್ಮಗಳನ್ನು ಜ್ಞಾನವೆಂಬ ಆಯುಧಗಳಿಂದ ಖಂಡಿಸುವುದೆಂಬ ಅರ್ಥವಿದೆ. ಯಾವಾಗಾದರೆ ಕರ್ಮ ನಾಶವಾಗಿ ಹೋಗುವುದೋ ಆಗ ಜೀವಿಗೆ ಮೋಕ್ಷ ಲಭಿಸುತ್ತದೆ. ಆ ವಿಧಾನವನ್ನು ತಿಳಿಸುವ ಸಲುವಾಗಿ ಭಗವಂತನ ಬಳಿ ಇರುವ ಜ್ಞಾನ ಖಡ್ಗಗಳನ್ನು ನಮ್ಮ ಕರ್ಮದ ಮೇಲೆ ಉಪಯೋಗಿಸಿಕೊಳ್ಳಬೇಕು. ಹಾಗೆ ನಡೆಯಬೇಕೆಂದರೆ ನಾವು ಭಗವಂತನನ್ನು ಪೂರ್ತಿಯಾಗಿ ನಂಬಿದಾಗ ಆತನ ಜ್ಞಾನದಿಂದ ನಮ್ಮ ಕರ್ಮ ಇಲ್ಲದಂತೆ ಹೋಗುತ್ತದೆ.

# 14. ನಾಮ

ಈಶ್ವರ ಲಿಂಗದ ಮೇಲೆ ವಿಭೂತಿ ರೇಖೆಗಳಿಗೆ ಕ್ಷರಾಕ್ಷರ ಪುರುಷೋತ್ತ ಮರೆಂದು ಅರ್ಥವಿರುವಂತೇ ತ್ರಿನಾಮಗಳಿಗೂ ಸಹ ಬೇರೆ ಒಂದು ವಿಧದಲ್ಲಿ ಆತ್ಮ ಜ್ಞಾನವನ್ನು ಭೋದಿಸುವಂತೆ ಅರ್ಥವಿದೆ. ಅದು ಏನೆಂದರೆ! ಪ್ರತಿ ಜೀವರಾಶಿ ಶರೀರದಲ್ಲಿಯೂ 3 ಲಕ್ಷದ 50 ಸಾವಿರ ನಾಡಿಗಳಿರುವಂತೆ ಕೇಳಿಬಂದಿದೆ. ಅವುಗಳಲ್ಲಿ 72 ಸಾವಿರ ಮುಖ್ಯವಾದವುಗಳು. ಅವುಗಳಿಗಿಂತ ಮುಖ್ಯವಾದವುಗಳು 10 ಮಾತ್ರವೇ. ಆ ಹತ್ತಕ್ಕಿಂತಲೂ ಮುಖ್ಯವಾದವು ಮೂರು ನಾಡಿಗಳಿವೆ. ಅವುಗಳೇ ಸೂರ್ಯನಾಡಿ, ಚಂದ್ರನಾಡಿ, ಬ್ರಹ್ಮನಾಡಿ. ಈ ಮೂರು ನಾಡಿಗಳು ನಮ್ಮ ಶರೀರಾಂತರ್ಗತ ಮಧ್ಯದಲ್ಲಿ ಶಿರಸ್ಸಿನಿಂದ ಹಿಡಿದು ಗುದ ಸ್ಥಾನದವರೆಗೂ ಬೆನ್ನು ಮೂಳೆ ಹತ್ತಿರ ಇವೆ. ಬೆನ್ನು ಮೂಳೆ ಮಧ್ಯದಲ್ಲಿ ಬ್ರಹ್ಮನಾಡಿ ಇದೆ. ಅದರ ಎರಡು ಪಕ್ಕದಲ್ಲಿ ಸೂರ್ಯಚಂದ್ರ ನಾಡಿಗಳು ಮಣಿಸರಗಳಂತೆ ವ್ಯಾಪಿಸಿಕೊಂಡಿವೆ. ಇವುಗಳಲ್ಲಿ ಮುಖ್ಯವಾದ ನಾಡಿ ಮಧ್ಯದಲ್ಲಿರುವ ಬ್ರಹ್ಮನಾಡಿ. ಬಲಗಡೆ ಇರುವುದು ಸೂರ್ಯನಾಡಿಯೆಂದು ಎಡಗಡೆ ಇರುವುದು ಚಂದ್ರನಾಡಿಯೆಂದು ಹೆಸರುಗಳಿವೆ. ಸೂರ್ಯ ಚಂದ್ರನಾಡಿಗಳಲ್ಲಿ ನಮ್ಮಲ್ಲಿರುವ ಮನಸ್ಸು ಇದೆ. ಮಧ್ಯ ನಾಡಿಯಾದ ಬ್ರಹ್ಮನಾಡಿಯಲ್ಲಿ ಜೀವಾತ್ಮನಿಗಿಂತಲೂ ಅತೀತವಾದ ಸರ್ವ ಜೀವರಾಶಿಗಳಲ್ಲಿಯೂ ಒಳಗೊಂಡಿರುವ ಆತ್ಮವಿದೆ. ಸೂರ್ಯ ಚಂದ್ರನಾಡಿಗಳಲ್ಲಿರುವ ಮನಸ್ಸು ಬ್ರಹ್ಮನಾಡಿಯನ್ನು ಸೇರುವುದನ್ನು ಯೋಗವೆಂದು ಹೇಳುವರು. ಮನಸ್ಸು ಬ್ರಹ್ಮನಾಡಿಯನ್ನು ಸೇರಿದರೂ ಅದರಲ್ಲಿರುವ ಆತ್ಮನನ್ನು ಜೀವಾತ್ಮ ಅನುಭವಿಸುತ್ತಿದೆ. ಅಂದರೆ ಜೀವಾತ್ಮ ಆತ್ಮರು ಒಂದಾಗಿದ್ದಾರೆಂಬ ಮಾತು. ಜೀವಾತ್ಮ ಆತ್ಮವೊಂದರ ಐಕ್ಯತೆಯನ್ನು ಸೂಚಿಸುವ ಜ್ಞಾನವೇ ಮೂರುನಾಮಗಳೆಂದು ತಿಳಿಯಬೇಕು.

ಬಲಭಾಗದಲ್ಲಿರುವ ನಾಮವನ್ನು ಸೂರ್ಯನಾಡಿಯಾಗಿ, ಎಡಭಾಗ ದಲ್ಲಿರುವ ನಾಮವನ್ನು ಚಂದ್ರನಾಡಿಯಾಗಿ, ಮಧ್ಯದಲ್ಲಿರುವ ನಾಮವನ್ನು ಬ್ರಹ್ಮನಾಡಿಯಾಗಿ ದೊಡ್ಡವರು ಗುರುತಿಸಿದ್ದಾರೆ. ಮನಸ್ಸಿನ ನಿವಾಸ ಸ್ಥಳವಾದ



(ನಾಮ)

ಸೂರ್ಯಚಂದ್ರ ನಾಡಿಗಳಿಗಿಂತಲೂ ಆತ್ಮನಿವಾಸವಾದ ಬ್ರಹ್ಮನಾಡಿಯೇ ಮುಖ್ಯವಾದುದು. ಆದ್ದರಿಂದ ಸೂರ್ಯಚಂದ್ರನಾಡಿಗಳಾಗಿ ಗುರುತಿಸುತ್ತಿರುವ ಬಲ, ಎಡ ಭಾಗಗಳಲ್ಲಿರುವ ನಾಮಗಳಿಗೆ ಬಿಳಿಬಣ್ಣವನ್ನು ತಿದ್ದಿ ಆತ್ಮ ಸ್ಥಾನವಾದ ಬ್ರಹ್ಮನಾಡಿಯಾಗಿ ಗುರುತಿಸುತ್ತಿರುವ ಮಧ್ಯ ನಾಡಿಗೆ ಕೆಂಪು ಬಣ್ಣ ತಿದ್ದಲಾಗಿದೆ. ಈ ವಿಧವಾಗಿ ತಿದ್ದಿರುವುದರಿಂದ ನೋಡುತ್ತಿದ್ದಂತೆಯೇ ಮಧ್ಯ ನಾಡಿಯಲ್ಲಿ ಒಂದು ಪ್ರತ್ಯೇಕತೆ ಕಾಣಿಸುತ್ತಾ ಇದೆ. ಮಧ್ಯ ನಾಡಿಯ ಒಂದು ದೊಡ್ಡತನವನ್ನು ತೋರಿಸುತ್ತ ಪಕ್ಕದಲ್ಲಿರುವ ಎರಡೂ ನಾಡಿಗಳಿಗಿಂತಲೂ ಉದ್ಧವಾಗಿ ತೋರಿಸ ಲಾಗಿದೆ. ಯಾವ ಜೀವಾತ್ಮವಾದರೂ ಬ್ರಹ್ಮನಾಡಿಯಲ್ಲಿನ ಆತ್ಮನಲ್ಲಿ ಸೇರಿ ಹೋದರೆ ಕೊನೆಗೆ ಮೋಕ್ಷ ಲಭ್ಯವಾಗುತ್ತದೆಂಬ ಉದ್ದೇಶವನ್ನು ತಿಳಿಸುತ್ತ ಮಧ್ಯದಲ್ಲಿರುವ ನಾಮವು ಮೊದಲ ಭಾಗದಿಂದ ದಪ್ಪ ತಗ್ಗಿಸುತ್ತ ಬಂದು ಕೊನೆಯ ಭಾಗದ ತುದಿಯನ್ನು ಸೂಜಿಯ ಮೊನೆಯಂತೆ ಇಡಲಾಗಿದೆ. ಆತ್ಮನಲ್ಲಿ ಸೇರುವವರು ಹೇಳುವುದಕ್ಕೆ ಸಾಧ್ಯವಿಲ್ಲದಂತಹ ಶೂನ್ಯವಾದ ಪರಮಾತ್ಮನಲ್ಲಿ ಬೆರೆತು ಹೋಗುತ್ತಾರೆಂಬುವುದಕ್ಕೆ ಸೂಚನೆಯಾಗಿ ಮಧ್ಯನಾಡಿಯ ಕೊನೆಯ ಭಾಗವು ಆಕಾಶದ ಕಡೆಗೆ ಇರುವಂತೆ ತೋರಿಸಿದ್ದಾರೆ. ತಿರುಪತಿ ದೇವಸ್ಥಾನದಲ್ಲಿ ವೆಂಕಟೇಶ್ವರನ ಮುಖದ ಮೇಲಿನ ವಿಧದ ಭಾವನೆಯನ್ನು ತೋರಿಸುತ್ತ ದೊಡ್ಡನಾಮವನ್ನು ಇಟ್ಟಿದ್ದಾರೆ. ಈ ವಿಧವಾಗಿ ವೆಂಕಟೇಶ್ವರನು ನಾಮದಿಂದ ದರ್ಶನ ಕೊಡುವುದರಿಂದ ಅವುಗಳ ವಿವರವನ್ನು ತಿಳಿದುಕೊಳ್ಳುತ್ತಾರೆಂದು ಗುರುತಿಗಾಗಿ ದೊಡ್ಡನಾಮವನ್ನು ಇಟ್ಟಿದ್ದಾರೆ. ಆತನ ನಾಮದ ಒಂದು ರಹಸ್ಯವನ್ನು ಯಾರು ತಿಳಿಯದೇ ಸಾಧಾರಣ ವಿಷಯವಾಗಿ ತೆಗೆದು

ಕೊಳ್ಳುತ್ತಿದ್ದಾರೆ. ನಾವೂ ಸಹ ನಾಮ ಧರಿಸುತ್ತಿದ್ದೇವೆ. ಆದರೆ ಆ ನಾಮವನ್ನು ಕುರಿತು ಯಾರೂ ವಿವರಿಸಿಕೊಳ್ಳುವಂತಿಲ್ಲ.

ಅಂದಿನ ಹಿರಿಯರು ಇಲ್ಲದೇ ಹೋಗಿದ್ದಾರೆ. ಈ ದಿನ ಜ್ಞಾನ ರಹಸ್ಯಗಳು ನಮಗೆ ತಿಳಿಯದ ಪರಿಸ್ಥಿತಿ ಏರ್ಪಟ್ಟಿದೆ. ಆದ್ದರಿಂದ ನಾಮವನ್ನು ಇಟ್ಟು ಕೊಂಡವರು ವೈಷ್ಣವರು, ವಿಭೂತಿ ರೇಖೆಗಳನ್ನು ಇಟ್ಟುಕೊಂಡವರು ಶೈವರೆಂದು ಭಾವಿಸಿಕೊಳ್ಳುತ್ತಿದ್ದೇವೆ. ತ್ರಿನಾಮವು ವಿಭೂತಿ ರೇಖೆಗಳು ಆತ್ಮ ಜ್ಞಾನ ಭೋದಿಸುವ ಗುರುತುಗಳೆಂದು ತಿಳಿಯದೇ ಕುಲ ವರ್ಗ ವ್ಯವಸ್ಥೆಗಳನ್ನು ತಿಳಿಸುವ ಚಿಹ್ನೆಗಳಾಗಿ ಭಾವಿಸಿಕೊಳ್ಳುತ್ತಿದ್ದೇವೆ. ದೇವಾಲಯಗಳಲ್ಲಿನ ದೇವರುಗ ಳನ್ನು ಸಹ ವೈಷ್ಣವ ದೇವರೆಂದು. ಶೈವರ ದೇವರೆಂದು ಬೇರ್ಪಡಿಸುತ್ತಿದ್ದೇವೆ. ಪರಮಾತ್ಮನ ಗುರುತಾದ ಲಿಂಗವನ್ನು ಶೈವದೇವರೆಂದು, ಭಗವಂತನ ಗುರುತಾದ ರಂಗನ ಪ್ರತಿಮೆಯನ್ನು ವೈಷ್ಣವ ದೇವರೆಂದು ಹೇಳಿಕೊಳ್ಳುವುದು ಅಧರ್ಮವಾಗುತ್ತದೆ.

# 15. ಹಸ್ತ

ದೇವರ ಗರ್ಭಗುಡಿಯಲ್ಲಿ ಇರುವ ಪ್ರತಿಮೆಗೆ ಎಷ್ಟೋ ವಿಶೇಷತೆ ಇದ್ದರೆ ಆ ಪ್ರತಿಮೆ ತೋರಿಸುವ ಹಸ್ತಕ್ಕೆ ಇನ್ನೂ ವಿಶೇಷತೆ ಇದೆ. ಪ್ರತಿಮೆಗಿರುವ ಹಸ್ತವೇ ನಮಗೂ ಸಹ ಇದೆ. ಪ್ರತಿಮೆ ತೋರಿಸುವ ಹಸ್ತದಲ್ಲಿ ಎಷ್ಟು ಅರ್ಥವಿದೆ ಎಂದು ಗ್ರಹಿಸಿದ ನಂತರ ನಮ್ಮ ಹಸ್ತದಲ್ಲಿಯೂ ಸಹ ಅಷ್ಟೇ ವಿಶೇಷತೆ ಇದೆ ಎಂದು ತಿಳಿಯಬಹುದು. ಆದ್ದರಿಂದ ದೇವಾಲಯದಲ್ಲಿರುವ ಪ್ರತಿಮೆಗಿರುವ ಹಸ್ತವನ್ನು ಕುರಿತು ತಿಳಿದುಕೊಳ್ಳೋಣ. ಹಸ್ತದ ಒಂದು ಆಕಾರವನ್ನು ಗೊಂಬೆಯಲ್ಲಿ ನೋಡುತ್ತೇವೆ.

ಹಸ್ತದ ಮಧ್ಯೆ ಮೂರು ರೇಖೆಗಳಿವೆ. ಆ ಮೂರು ರೇಖೆಗಳಲ್ಲಿ ಕೆಳಗೆ ಎರಡು ರೇಖೆಗಳ ತುದಿಗಳು ಒಂದು ಕಡೆ ಒಂದಕ್ಕೊಂದು ಬೆರೆತಿವೆ.

ಮೂರನೆಯ ರೇಖೆ ಕೆಳಗಿರುವ ಎರಡು ರೇಖೆಗಳಿಗಿಂತಲೂ ಮೇಲೆ ಇದ್ದು ಎರಡು ರೇಖೆಗಳೊಂದಿಗೆ ಸೇರದಂತೆ ಬೇರೆಯಾಗಿ ಇದೆ. ಇವುಗಳ ಭಾವನೆಯೇ ನೆಂದರೆ ಭಗವದ್ಗೀತೆಯ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ

**16ನೇ ಶ್ಲೋಕ :** ***"ದ್ವಾವಿಮೌ ಪುರುಷೌ ಲೋಕೇಕ್ಷರಶ್ಚಾಕ್ಷರ ಏವ ಚ***
***ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ"***

ಭೂಮಿಯ ಮೇಲೆ ಎರಡು ವಿಧದ ಪುರುಷರಿದ್ದಾರೆ. ಆ ಇಬ್ಬರಲ್ಲಿ ಒಬ್ಬನು ಕ್ಷರ (ನಾಶವಾಗುವವನು), ಎರಡನೆಯವನು ಅಕ್ಷರ (ನಾಶವಾಗ ದವನಂತೆ) ಇದ್ದಾರೆ. ಕ್ಷರ ಎಂಬುವನು ಸರ್ವ ಜೀವರಾಶಿಗಳಲ್ಲಿಯೂ ಜೀವಿಯಾಗಿದ್ದಾನೆ. ಅಕ್ಷರ ಎಂಬುವನು ಸರ್ವ ಜೀವಿಗಳ ಶರೀರಗಳಲ್ಲಿಯೂ ಕೂಟಸ್ಥನಾಗಿ ಬೆರೆತು ಇದ್ದಾನೆಂಬ ಶ್ರೀಕೃಷ್ಣ ಪರಮಾತ್ಮನ ಮಾತಿನ ಪ್ರಕಾರ ಮಧ್ಯ ಹಸ್ತದಲ್ಲಿ ಕ್ಷರಾಕ್ಷರರನ್ನು ಎರಡು ರೇಖೆಗಳು ಬಿಡಿಯಾಗಿದ್ದು ತುದಿಗಳು ಬೆರೆತುಕೊಂಡಿವೆ. ಸಮಸ್ತ ಶರೀರಗಳಲ್ಲಿಯೂ ಕ್ಷರರಾಗಿ ಇರುವ ಜೀವಾತ್ಮನನ್ನು ಹಾಗೆಯೇ ಸಮಸ್ತ ಶರೀರಗಳಲ್ಲಿಯೂ ಚೈತನ್ಯ ಶಕ್ತಿಯಾಗಿರುವ ಆತ್ಮನನ್ನು ಸೂಚಿಸುವ ಗುರುತುಗಳೇ ಹಸ್ತದಲ್ಲಿನ ಕೆಳಗಿನ ಎರಡು ರೇಖೆಗಳೆಂದು ತಿಳಿಯಬೇಕು.

"ಉತ್ತಮ ಹಂ ಪುರುಷಸ್ತ್ವನ್ಯ: ಪರಮಾತ್ಮೆ" ಎಂಬ ಹದಿನೇಳನೆಯ ಶ್ಲೋಕದಲ್ಲಿನ ವಾಕ್ಯದ ಪ್ರಕಾರ ಮತ್ತು "ಯಸ್ಮಾತ್ ಕ್ಷರ ಮತಿತೋ ಅಮಕ್ಷರಾದಪಿ ಚೋತ್ತಮಃ" ಎಂಬ ಹದಿನೆಂಟನೆಯ ಶ್ಲೋಕದ ಪ್ರಕಾರ ಇಬ್ಬರು ಪುರುಷರಿ ಗಿಂತಲೂ ಉತ್ತಮವಾದ ಪುರುಷನೊಬ್ಬನಿದ್ದಾನೆ. ಅವನೇ ಪರಮಾತ್ಮ. ಅವನು ಕ್ಷರನಿಗಿಂತಲೂ ಅತೀತನು, ಅಕ್ಷರನಿಗಿಂತಲೂ ಶ್ರೇಷ್ಠನಾದವನು, ಆದ್ದರಿಂದ ಅವನನ್ನು ಪುರುಷೋತ್ತಮನೆಂದು ಕರೆಯುತ್ತಿದ್ದೇವೆ. ಆತ್ಮನಿಗಿಂತ ಬೇರೆಯಾಗಿ ಇದ್ದಾನೆ ಆದ್ದರಿಂದ ಪರಮಾತ್ಮನೆಂದು, ಜೀವಾತ್ಮ ಆತ್ಮಗಳಿಗಿಂತಲೂ ಉತ್ತಮ ನಾಗಿದ್ದಾನೆ ಆದ್ದರಿಂದ ಪುರುಷೋತ್ತಮನೆಂದು ಹೇಳುತ್ತಿದ್ದೇವೆ. ಪರಮಾತ್ಮ ಪುರುಷೋತ್ತಮ ಎನ್ನುವವು ಆತನ ಸಾಮರ್ಥ್ಯವನ್ನು ತಿಳಿಸುವ ಪದಗಳೇ

ಹೊರತು ವಾಸ್ತವವಾಗಿ ಅವು ಹೆಸರುಗಳಲ್ಲ. ಇಬ್ಬರು ಪುರುಷರಿಗಿಂತಲೂ ಬೇರೆಯಾಗಿ ಅತೀತನಾಗಿದ್ದಾನೆ ಆದ್ದರಿಂದ ಹಸ್ತದಲ್ಲಿ ಮೂರನೆಯ ರೇಖೆ ಎರಡು ರೇಖೆಗಳಿಂಗಿತಲೂ ಬೇರೆಯಾಗಿ ಮೇಲೆ ಇದೆ. ಸೃಷ್ಟಿಗೆ ಕಾರಣವಾದ ಸೃಷ್ಟಿಯಲ್ಲಿನ ಮೂಲ ಪುರುಷರಾದ ಕ್ಷರಾಕ್ಷರ ಪುರುಷೋತ್ತಮರ ಗುರುತುಗಳನ್ನು ತಿಳಿಸುವ ಹಸ್ತವು ಪ್ರತಿಮೆಯಿಂದ ತೋರಿಸಲ್ಪಡುತ್ತಿದೆ. ಪ್ರಪಂಚದಲ್ಲಿ ಮುಖ್ಯವಾದ ಮೂವರು ಮೂಲ ಪುರುಷರ ವಿಷಯ ಹಸ್ತದಲ್ಲಿರುವುದರಿಂದ ಅಂಗೈಯಲ್ಲಿ ಎಲ್ಲಾ ಇದೆಯೆಂದು, ಅಂಗೈಯಲ್ಲಿ ವೈಕುಂಠವಿದೆ ಎಂದು ದೊಡ್ಡವರು ಹೇಳುತ್ತಿದ್ದರು. ಅಂಗೈಯಲ್ಲಿನ ಅರ್ಥವೇ ಅಲ್ಲದೆ ಒಂದು ಅಂಗೈಯನ್ನೇ ಅಲ್ಲದೆ ಹಸ್ತವನ್ನೆಲ್ಲ ಪರಿಶೀಲಿಸಿ ನೋಡೋಣ.

ಹಸ್ತದಲ್ಲಿ ಐದು ಬೆರಳುಗಳಿವೆ. ಐದು ಬೆರಳುಗಳು ಪಂಚಭೂತಗಳಿಗೂ, ಐದುಜ್ಞಾನೇಂದ್ರಿಯಗಳಿಗೂ, ಐದು ವಾಯುವುಗಳಿಗೂ ಪ್ರತೀಕವಾಗಿವೆ. ಇವುಗಳನ್ನು ಸಂದರ್ಭಾನುಸಾರವಾಗಿ ಅರ್ಥಮಾಡಿಕೊಳ್ಳಬೇಕು. ಇಲ್ಲಿ ಐದು ಬೆರಳುಗಳನ್ನು ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯಾಗಿ ಅರ್ಥಮಾಡಿಕೊಳ್ಳಬೇಕು. ಹಸ್ತದ ಮಧ್ಯದಲ್ಲಿರುವ ರೇಖೆಗಳನ್ನು ಮೂವರು ಪುರುಷರಾಗಿ ಐದು ಬೆರಳುಗಳು, ಐದು ಪ್ರಕೃತಿ ಭಾಗಗಳಾಗಿ ಲೆಕ್ಕಿಸಿಕೊಳ್ಳುವುದರಿಂದ ಒಟ್ಟಾರೆ ಪ್ರಪಂಚ ಅದಕ್ಕೆ ಆಧಾರವಾದ ಪರಮಾತ್ಮ, ಆತ್ಮ, ಜೀವಾತ್ಮಗಳು ಅಂದರೆ ಯಾವತ್ ಅಂಡಪಿಂಡ ಬ್ರಹ್ಮಾಂಡವೆಲ್ಲ ಹಸ್ತದಿಂದಲೇ ತಿಳಿದು ಬರುವಂತೆ ಅರ್ಥವಾಗುತ್ತದೆ. ಪಂಚಭೂತಗಳಾದ ಪ್ರಕೃತಿ ಪರಮಾತ್ಮ ಎರಡನ್ನೂ ಹಸ್ತದಲ್ಲಿಯೇ ಇರುವಂತೆ ಪ್ರತಿಮೆಯನ್ನು ತೋರಿಸುವುದೇ ಅಲ್ಲದೇ ಪ್ರತಿಯೊಬ್ಬರಲ್ಲಿಯೂ ಪ್ರಕೃತಿ ಪರಮಾತ್ಮರಿರುವಂತೆ ತಿಳಿದುಕೊಳ್ಳಬೇಕೆಂದು ತಿಳಿದು ಬಂದಿದೆ.

ಒಬ್ಬ ಮನುಷ್ಯನ ಶರೀರದಲ್ಲಿ ಜೀವಾತ್ಮ, ಆತ್ಮನೇ ಅಲ್ಲದೆ ಪರಮಾತ್ಮ ಮತ್ತು ಪ್ರಕೃತಿ ಇರುವಂತೆ ಹಸ್ತದಲ್ಲಿ ತಿಳಿಯಲ್ಪಟ್ಟಿರುವುದೇ ಅಲ್ಲದೆ ಮತ್ತೊಂದು ರಹಸ್ಯವೂ ಸಹ ಬಹಿರ್ಗತವಾಗುತ್ತದೆ. ಆ ರಹಸ್ಯವೇನೆಂದರೆ ಮನುಷ್ಯ ಪ್ರಕೃತಿಯಲ್ಲಿದ್ದರೆ ಯಾವ ವಿಧವಾಗಿ ಇರುತ್ತಾನೆ, ಪರಮಾತ್ಮನೊಳಗೆ ಹೋದರೆ




**(ಹಸ್ತ)**

ಹೇಗಿರುತ್ತಾನೆಂಬ ವಿಷಯ. ಶರೀರದೊಳಗಿನ ಪ್ರಕೃತಿಯಲ್ಲಿ ಸಿಲುಕಿಕೊಂಡ ಜೀವಿಯು ಪ್ರಕೃತಿ ಜನಿತವಾದ ಮೂರು ಗುಣಗಳಲ್ಲಿ ಇದ್ದಾನೆಂದು ತೋರಿಸುವುದು ಒಂದು ವಿಧಾನವಾದರೆ, ಮೂರು ಗುಣಗಳನ್ನು ದಾಟಿದ ಮೇಲೆ ಹೇಗಿರುವನೆಂಬ ವಿಷಯ ಮತ್ತು ಮೂರು ಗುಣಗಳನ್ನು ಅತಿಕ್ರಮಿಸಿ ಇರುವುದರಿಂದ ಸ್ವಲ್ಪ ಕಾಲಕ್ಕೆ ಜೀವಿಯು ಪೂರ್ತಿಯಾವ ವಿಧವಾಗಿ ಬದಲಾಗಿ ಹೋಗುವನೆಂಬ ವಿಷಯವನ್ನೂ ಸಹ ತಿಳಿಯಲ್ಪಡುತ್ತಿದೆ. ಆ ವಿಷಯಗಳು ಹಸ್ತದಲ್ಲಿ ಹೇಗಿದೆ ಎಂಬುದನ್ನು ಪರೀಕ್ಷಿಸಿ ನೋಡೋಣ. ಹಸ್ತಕ್ಕಿರುವ ಬೆರಳುಗಳಿಗೆ

ಮೂರು ಗೆಣ್ಣುಗಳಿವೆ. ಬೆರಳುಗಳಿರುವ ಅಡ್ಡಗೆರೆಗಳಿಂದ ಒಂದೊಂದು ಬೆರಳು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟು ಕಾಣಿಸುತ್ತಿದೆ. ಐದು ಬೆರಳುಗಳು ಪಂಚಭೂತಗಳಿಗೆ ಪ್ರತೀಕವಾದರೆ ಪಂಚಭೂತಗಳೆನಿಸಿಕೊಳ್ಳುವ ಪ್ರಕೃತಿಗೆ ಮೂರು ಗುಣಗಳು ಹುಟ್ಟಿವೆಯೆಂದು, ಪಂಚಭೂತ ನಿರ್ಮಿತವಾದವುಗಳೇ ಮೂರು ಗುಣಗಳೆಂದು ತಿಳಿಯುವಂತೆ ಐದು ಬೆರಳುಗಳು ಮೂರು ಭಾಗಗಳಾಗಿವೆ. ಪ್ರಕೃತಿಯಲ್ಲಿ ಹುಟ್ಟಿದ ಜೀವಿಯು ಪ್ರಕೃತಿ ಗುಣಗಳಲ್ಲಿಯೇ ಸಿಲುಕಿಕೊಂಡು ಇದ್ದಾನೆಂದು ಗುಡಿಯಲ್ಲಿನ ದೇವರು ಹಸ್ತವನ್ನು ತೋರಿಸಿ ತಿಳಿಸುತ್ತಿದ್ದಾನೆ. ಹಸ್ತದೊಳಗಿನ ಅಂಗೈ ಮಧ್ಯದಲ್ಲಿ ಇದ್ದರೆ ಅಂಗೈ ಕೆಳಗೆ ಮಣಿಕಟ್ಟಿನ ಮೇಲೆ ಮೂರು ಮಡತೆಗಳು ಕಾಣಿಸುತ್ತಿವೆ. ಆ ಗೆರೆಗಳನ್ನು ಬೆರಳುಗಳಲ್ಲಿನ ಗೆರೆಗಳಿಗೆ ಸೇರಿಸಿದರೆ ಅಂಗೈ ಸುತ್ತಲೂ ಚಕ್ರವೇರ್ಪಟ್ಟಂತಿದೆ. ಹಸ್ತವು ಗೊಂಬೆಯಲ್ಲಿ ತೋರಿಸಿರುವಂತೆ ಮೂರು ರೇಖೆಗಳಿಗೆ ಮಧ್ಯದಲ್ಲಿನ ಅಂಗೈಯಲ್ಲಿ ಮೂರು ಆತ್ಮಗಳು ಕಾಣಿಸುತ್ತಿರುವಾಗ ಅಂಗೈಯಿಂದ ಬೆರಳುಗಳ ಕಡೆಗೆ ಮೂರು ಭಾಗಗಳಿವೆಯಲ್ಲವೆ! ಅವುಗಳಲ್ಲಿ ಮೊದಲನೆಯದು ತಾಮಸ ಗುಣಭಾಗವೆಂದು, ಎರಡನೆಯದು ರಾಜಸಗುಣ ಭಾಗವೆಂದು, ಮೂರನೆಯದು ಸಾತ್ತ್ವಿಕ ಗುಣಭಾಗ ವೆಂದು ತಿಳಿಯಬೇಕು. ಕೈಯಲ್ಲಿ ತೋರಿಸಿರುವಂತೆ ಶರೀರದಲ್ಲಿನ ಜೀವಿಯು ಈ ಮೂರು ಗುಣಗಳಲ್ಲಿಯೇ ಇದ್ದಾನೆ. ಗುಣಗಳಾಗಿ ಗುರುತಿಸಿರುವ ಕೈಗೆಣ್ಣುಗಳಲ್ಲಿ ಸಾತ್ತ್ವಿಕವಾಗಿ ಗುರುತಿಸಿರುವ ಬೆರಳುಗಳ ಕೊನೆಯ ಭಾಗವಾದ ಗೆಣ್ಣುಗಳಲ್ಲಿ ಶಂಖು ಚಕ್ರಗಳ ಆಕಾರವಿರುತ್ತದೆ. ಶಂಖು ಜ್ಞಾನಬೋಧನೆಯೆಂದು, ಚಕ್ರ ಕರ್ಮನಾಶವೆಂದು ಹಿಂದಿನ ಅಧ್ಯಾಯದಲ್ಲಿಯೇ ತಿಳಿದುಕೊಂಡಿದ್ದೇವೆ. ಜ್ಞಾನಬೋಧನೆ ತಿಳಿದು ಕರ್ಮನಾಶ ಮಾಡಿಕೊಳ್ಳುವ ವಿಧಾನ ಒಂದು ಇದೆಯೆಂದು ತಿಳಿಸುವುದೇ ಬೆರಳುಗಳಿಗೆ ಶಂಖು ಚಕ್ರಗಳಿರುವ ಅರ್ಥವೆಂದು ತಿಳಿಯಬೇಕು. ಬೆರಳುಗಳ ತುದಿಯಲ್ಲಿರುವ ಶಂಖು ಚಕ್ರಗಳನ್ನು ನೋಡಿದ ನಂತರ ಅದಕ್ಕೆ ಸಂಬಂಧಿಸಿದ ವಿಧಾನ ಗುಣಗಳ ಹಿಂದೆ ಬಿಳಿಯ ಉಗುರಾಗಿ ಇದೆ ಎಂದು ತಿಳಿಯಬಲ್ಲೆವು. ಮೂರು ಗುಣಗಳೇ ಅಲ್ಲ, ಅವುಗಳನ್ನು ಅವುಗಳಿಂದಲೇ ಬರುವ ಕರ್ಮವನ್ನು ಜಯಿಸುವ ಯುದ್ಧವೂ ಸಹ ಇದೆಯೆಂದು

ಯುದ್ಧ ಚಿಹ್ನೆಗಳಾಗಿರುವ ಶಂಖು ಚಕ್ರಗಳನ್ನು ಬೆರಳುಗಳ ತುದಿಭಾಗದಲ್ಲಿ ದೇವರು ಚಿತ್ರಿಸಿರುವುದು ನಡೆದಿದೆ. ಹೀಗೆ ಎಷ್ಟೋ ಆಕಾರಗಳನ್ನು ಹಸ್ತದಲ್ಲಿ ಚಿತ್ರಿಸಿರುವಾಗ ಕೆಲವರು ಹಸ್ತದಲ್ಲಿನ ರೇಖೆಗಳನ್ನು ಶಂಖು ಚಕ್ರಗಳನ್ನು ಜ್ಯೋತಿಷ್ಯವಾಗಿ, ಹಸ್ತ ಸಾಮುದ್ರಿಕವಾಗಿ ಹೇಳಿಕೊಳ್ಳುವುದು ತಪ್ಪು ಎಂದು ಗಮನಿಸಬೇಕು. ಕೊನೆಯ ಭಾಗದಲ್ಲಿರುವ ಸಾತ್ತ್ವಿಕ ಗುಣಭಾಗದ ನಂತರ ಉಗುರುಗಳು ಕಾಣಿಸುತ್ತಿವೆ. ಉಗುರನ್ನು ನೋಡಿದಾಗ ಬೆರಳುಗಳು ಮೂರು ಗೆಣ್ಣುಗಳ ಚರ್ಮಕ್ಕಿಂತಲೂ ಗಟ್ಟಿಯಾಗಿದ್ದು ಬೆರಳುಗಳ ಬಣ್ಣಕ್ಕಿಂತ ಬೇರೆಯಾಗಿ ಬೆಳ್ಳಗಿರುತ್ತವೆ. ಮೂರು ಗುಣಗಳಲ್ಲಿಯೂ ಜೀವಿಯು ಇರುವುದೇ ಅಲ್ಲದೆ ನಾಲ್ಕನೆಯ ಸ್ಥಾನವು ಸಹ ಜೀವಾತ್ಮನಿಗಿದೆ ಎನ್ನುವಂತೆ ಬೆರಳುಗಳ ತುದಿಭಾಗದಲ್ಲಿ ಉಗುರುಗಳಿರುವುದೊಂದರ ಅರ್ಥ. "ಚಾತುರ್ವರ್ಣ್ಯಂ" ಎಂದು ಭಗವದ್ಗೀತೆ ಯಲ್ಲಿ ಹೇಳಿರುವಂತೆ ಜೀವಿಗಳು ಸಾತ್ತ್ವಿಕರು, ರಾಜಸರು, ತಾಮಸರೇ ಅಲ್ಲದೆ ಯೋಗಿಗಳೂ ಸಹ ಇದ್ದಾರೆ. ಪ್ರಕೃತಿಯಲ್ಲಿನ ಆ ಯೋಗಿಗಳ ಒಂದು ಸ್ಥಾನವನ್ನು ತಿಳಿಸುವುದೇ ಉಗುರು. ಉಗುರು ಬೆಳ್ಳಗೆ ಇದ್ದು ಯೋಗಿಗಳ ಸ್ಪಷ್ಟತೆಯನ್ನು ತಿಳಿಸುತ್ತಿದೆ. ಯೋಗಿಗಳಾದವರು ಜ್ಞಾನವನ್ನು ಹೊಂದಿರುತ್ತಾ ರೆಂಬುವುದಕ್ಕೆ ಅಥವಾ ಜ್ಞಾನ ಇರುವವರೇ ಯೋಗಿಗಳಾಗುವರು ಎಂಬುದಕ್ಕೆ, ಜ್ಞಾನದಿಂದಲೇ ಯೋಗವು ಪ್ರಾಪ್ತಿಸುತ್ತದೆನ್ನುವುದಕ್ಕೆ ಗುರುತಾಗಿ ಜ್ಞಾನಕ್ಕೆ ಚಿಹ್ನೆಯಾದ ಚಂದ್ರನು ಬೆಳ್ಳಗಿರುವ ಉಗುರಿನ ಮೇಲೆ ಮತ್ತಷ್ಟು ಬೆಳ್ಳಗೆ ಕಾಣಿಸುತ್ತಾ ಇರುತ್ತಾನೆ. ಈ ವಿಧವಾಗಿ ಬೆರಳುಗಳ ಮೂರು ಗೆಣ್ಣುಗಳು ಮೂರು ಗುಣಗಳಾ ದಾಗ ಕೊನೆಯದಾಗಿ ಮೇಲ್ನೋಟಕ್ಕೆ ಕಾಣಿಸುವ ಉಗುರು ಯೋಗಿಗಳ ಸ್ಥಾನವನ್ನು ಸೂಚಿಸುತ್ತದೆ. ಉಗುರಿನ ಮೇಲೆ ಉದಯಿಸುವ ಚಂದ್ರನು ಜ್ಞಾನವನ್ನು ಸೂಚಿಸುತ್ತಿದ್ದಾನೆ.

ಮೂರು ಗುಣಗಳಲ್ಲಿರುವವನಿಗೆ ಕಷ್ಟ ಸುಖಗಳಿರುತ್ತವೆ. ಮೂರು ಗುಣಗಳನ್ನು ದಾಟಿ ಯೋಗದಲ್ಲಿರುವವನೂ ಸಹ ಕಷ್ಟ ಸುಖಗಳಿಗೆ ಒಳಗಾಗಿರುತ್ತಾನೆ. ಏಕೆಂದರೆ ಮೂರು ಗುಣಗಳಲ್ಲಿದ್ದರೂ, ಯೋಗದಲ್ಲಿದ್ದರೂ

ಜೀವಿಯು ಕಷ್ಟ ಸುಖಗಳನ್ನು ಅನುಭವಿಸುವುದು ತಪ್ಪುವುದಿಲ್ಲ. ಕಷ್ಟಸುಖಗಳು ಪೂರ್ತಿಯಾಗಿ ಇಲ್ಲದಂತೆ ಹೋಗಬೇಕೆಂದರೆ ಜೀವಾತ್ಮ ಗುಣಗಳನ್ನು ಯೋಗ ವನ್ನು ಎಲ್ಲವನ್ನು ತೊರೆದು ಮೋಕ್ಷ ಹೊಂದಬೇಕು. ಮೋಕ್ಷ ಹೊಂದಿದವನಿಗೆ ಯಾವ ಅನುಭೂತಿಯೊಂದಿಗೂ ಸಂಬಂಧವಿರುವುದಿಲ್ಲ. ಕಷ್ಟ ಸುಖ ಅನುಭವ ಯಾವುವು ಇರುವುದಿಲ್ಲ. ಆದ್ದರಿಂದಲೇ ಮೂರು ಗುಣಗಳನ್ನು ಸೂಚಿಸುವ ಬೆರಳುಗಳ ಗೆಣ್ಣುಗಳಲ್ಲಿ ಚಾಕುವಿನಿಂದ ಚುಚ್ಚಿದ ಕೂಡಲೇ ನೋವು ಕಾಣಿಸಿ ಕೊಳ್ಳುತ್ತದೆ. ಯೋಗವನ್ನು ಸೂಚಿಸುವ ಉಗುರು ಸಹ ಬೆರಳುಗಳಿಗಿಂತಲೂ ಸ್ವಲ್ಪ ವ್ಯತ್ಯಾಸದಿಂದ ನೋವು ಕಾಣಿಸುತ್ತದೆ. ಮೋಕ್ಷ ಹೊಂದಿದವನಿಗೆ ಯಾವ ಅನುಭೂತಿಯು ಇರುವುದಿಲ್ಲ, ಆದ್ದರಿಂದ ಬಿಳಿಯ ಉಗುರಿನ ತುದಿಯಲ್ಲಿ ಬೆರಳಿನ ಮೇಲ್ಭಾಗದ ತುದಿಯಲ್ಲಿ ಬಿಳಿಯ ಉಗುರಿನಿಂದ ನೀಲ ವರ್ಣವಿರುವ ಉಗುರು ಹುಟ್ಟಿರುತ್ತದೆ. ಆ ಉಗುರು ಮೋಕ್ಷವನ್ನು ಸೂಚಿಸುವುದಾಗಿದ್ದು ನೀಲಿ ವರ್ಣಹೊಂದಿ ಪ್ರತ್ಯೇಕವಾಗಿರುತ್ತದೆ. ಮೋಕ್ಷ ಹೊಂದಿದವನಿಗೆ ಕಷ್ಟ ಸುಖ ಅನುಭೂತಿಗಳು ಇಲ್ಲವೆನ್ನುವಂತೆ ನೀಲಿ ವರ್ಣದ ಉಗುರನ್ನು ಚಾಕುವಿನಿಂದ ಕೊಯ್ದರು ಯಾವ ಮಾತ್ರ ನೋವಾಗಲೀ ಸುಖವಾಗಲೀ ಇರುವುದಿಲ್ಲ. ಮೋಕ್ಷ ಹೊಂದಿದ ಜೀವಿಯು ಈ ವಿಧವಾಗಿ ಇದ್ದಾನೆಂದು ತಿಳಿಸುವ ಉದ್ದೇಶವೇ ತುದಿಯ ಉಗುರು ನೋವು ಇಲ್ಲದಂತಾಗಿರುತ್ತದೆ. ಮೂರು ಆತ್ಮಗಳ ವಿಧಾನ, ಮೂರು ಗುಣಗಳ ವಿಧಾನ, ಜ್ಞಾನ ಯೋಗದ ಒಂದು ವಿಧಾನ, ಕೊನೆಗೆ ಮೋಕ್ಷದ ಒಂದು ವಿಧಾನ ತಿಳಿಸುವುದೇ ದೇವರ ಹಸ್ತದ ದರ್ಶನ. ಪ್ರತಿಮೆ ತೋರಿಸುವ ಹಸ್ತದಲ್ಲಿ ಎಷ್ಟೋ ಜ್ಞಾನ ಒಳಗೊಂಡಿರಲು ಅದನ್ನು ಅಭಯ ಹಸ್ತವೆನ್ನುವುದು ತಪ್ಪಲ್ಲವೇ! ಆಕಾರವಿರುವ ಪ್ರತಿಮೆಯ ಹಸ್ತದಲ್ಲಿ ಯಾವ ಅರ್ಥವಿದೆಯೋ, ನಿನ್ನಕೈ ಹಸ್ತದಲ್ಲಿಯೂ ಸಹ ಅದೇ ಅರ್ಥವಿದೆ. ನಿನ್ನ ಕೈಯ್ಯನ್ನು ನೀನೆ ನೋಡಿಕೋ ಎಂದು, ಅದರಲ್ಲಿನ ಅರ್ಥವನ್ನು ತಿಳಿದುಕೋ ಎಂದು ದೇವಾಲಯದೊಳಗಿರುವ ದೇವರು ಹಸ್ತವನ್ನು ತೋರಿಸುತ್ತಿದ್ದಾನೆಂದು ತಿಳಿದುಕೊಳ್ಳಬೇಕು.

ಯೋಗಕ್ಕೆ ಜ್ಞಾನದ ಅವಶ್ಯವಿದೆ ಎಂದು “ಶ್ರೇಯೋಹಿ ಜ್ಞಾನ ಮಭ್ಯಾಸಾತ್” ಎಂದು ಭಗವದ್ಗೀತೆಯಲ್ಲಿ ಪರಮಾತ್ಮ ಭಗವಂತನ ರೂಪದಲ್ಲಿ ತಿಳಿಸಿರಲು, ನಮ್ಮ ಹಸ್ತದಲ್ಲಿಯೂ ಸಹ ಯೋಗವನ್ನು ತಿಳಿಸುವ ಬಿಳಿಯ ಉಗುರಿಗೆ ಮತ್ತು ಬಿಳಿ ಚಂದ್ರನು ಇರುವಂತೆ ತಿಳಿಯುತ್ತಿದ್ದರೂ **ಕೆಲವರು ಮಾಯೆಯ ವಶರಾಗಿ ಜ್ಞಾನದಿಂದ ಕೆಲಸವಿಲ್ಲ ಮೂತಿ ಮೇಲೆ ದ್ಯಾಸ ಇಟ್ಟುಕೊಳ್ಳಿ ರೆಂದೋ, ಮೂತಿಯೊಳಗಿನ ಮೂಗಿನ ಮೇಲೆ ದ್ಯಾಸವಿಟ್ಟುಕೊಳ್ಳಿ ರೆಂದೋ, ಮೂಗಿನೊಳಗಿನ ಶ್ವಾಸದ ಮೇಲೆ ದ್ಯಾಸಇಟ್ಟುಕೊಳ್ಳುವಂತೆಯೋ ಹೇಳುವುದು ಗೀತೆಯೊಳಗಿನ ದೇವರ ಮಾತನ್ನು ದಿಕ್ಕರಿಸಿದಂತೆ ಅಲ್ಲವೇ! ದೇವಾಲಯ ದೊಳಗಿನ ಪ್ರತಿಮೆಯ ಹಸ್ತ ಸಂದೇಶವನ್ನು ಮರೆತು ಮತ್ತೆಲ್ಲಿಯೋ ಇಟ್ಟಂತಲ್ಲವೇ! ಅವರವರ ಕೈಯೊಳಗಿನ ದೇವರ ಸಂದೇಶ ಮುದ್ರೆಯನ್ನು ವಿಸ್ಮರಿಸಿ ದಂತಲ್ಲವೇ! ಜ್ಞಾನವನ್ನು ಕಸದಂತೆ ಸಮಾನವಾಗಿ ಹೇಳುವುದು ಮಾಯೆಯೊಂದರ ಮಾತು ಅಲ್ಲವೇ, ಹಾಗೆಂದುಕೊಂಡರೆ ಭಗವಂತನ ಜ್ಞಾನವನ್ನು ಗೀತೆಯಲ್ಲಿ ಹೇಳಬೇಕಾದ ಕೆಲಸವೇ ಇಲ್ಲ! “ಶ್ರೇಯೋಹಿ ಜ್ಞಾನ ಮಭ್ಯಾಸಾತ್” ಎಂಬ ಮಾತಿಗೆ ಬೆಲೆಯೇ ಇಲ್ಲ!** ಯಾರು ಏನೆಂದುಕೊಂಡರೂ ದೇವಾಲಯದಲ್ಲಿನ ದೇವರ ಹಸ್ತದಲ್ಲಿ ಎಷ್ಟೋ ಸಂದೇಶವಿದೆಯೆಂದು, ಅದು ಯಾವತ್ ಪ್ರಪಂಚಕ್ಕೂ, ಮೋಕ್ಷಕ್ಕೂ ಗುಣಗಳಿಗೂ, ಯೋಗಕ್ಕೂ, ಜ್ಞಾನಕ್ಕೂ ಪ್ರತ್ಯಕ್ಷ ಸಾಕ್ಷಿಯೆಂದು ತಿಳಿಯಬೇಕು. ಪೂರ್ವಕಾಲದಲ್ಲಿ ಬೆಳಗ್ಗೆ ಎದ್ದಕೂಡಲೇ ಹಸ್ತವನ್ನು ನೋಡಿಕೊಳ್ಳುವುದು ಮುಖ್ಯ ಸಂಪ್ರದಾಯವಾಗಿ ಇಂದೂಗಳಲ್ಲಿ ಇದ್ದಿತು. ಈಗ ಆ ಸಂಪ್ರದಾಯ ನೂರಕ್ಕೆ ಒಂದರಷ್ಟು ಎಲ್ಲಿಯಾದರೂ ಇರಬಹುದು. ಪೂರ್ವಕಾಲದಲ್ಲಿ ಬೆಳಿಗ್ಗೆ ಎದ್ದಕೂಡಲೇ ಕಣ್ಣು ತೆರೆಯುತ್ತಿದ್ದಂತೆಯೇ ಮೊಟ್ಟ ಮೊದಲ ದೃಶ್ಯವಾಗಿ ಹಸ್ತವನ್ನೇ ನೋಡಿಕೊಳ್ಳುತ್ತಿದ್ದರು. ಹಸ್ತವನ್ನು ನೋಡುವುದರಿಂದ ಹಸ್ತದೊಳಗಿನ ರಹಸ್ಯಗಳೆಲ್ಲ ಜ್ಞಾಪಕಕ್ಕೆ ತಂದುಕೊಂಡು ನಾನು ಈ ದಿನವೆಲ್ಲ ಮೋಕ್ಷಕ್ಕಾಗಿ ಹೋರಾಡುತ್ತಿದ್ದೇನೆಂದು ತಿಳಿದು ಪರಮಾತ್ಮನ ಚಿಹ್ನೆಯಾದ ರೇಖೆಯನ್ನು ಭಕ್ತಿ ಪೂರ್ವಕವಾಗಿ ಕಣ್ಣುಗಳಿಗೆ ಒತ್ತಿಕೊಳ್ಳುತ್ತಿದ್ದರು. ಹಿಂದೆ ಹಿರಿಯರ ಭಾವನೆಯನ್ನೇ ನಾವು ಹೊಂದಿದ್ದು ಹಸ್ತವನ್ನು ನೋಡಬೇಕೆಂದು, ಇತರರಿಗೂ

ಸಹ ಹಸ್ತದ ಒಂದು ವಿವರವನ್ನು ತಿಳಿಸಬೇಕೆಂದು, ದೇವಾಲಯಗಳು ಆಧ್ಯಾತ್ಮಿಕ ಕೇಂದ್ರಗಳೆಂದು, ಆರಾಧನೆಗಳು ಅರ್ಥದಿಂದ ಕೂಡಿಕೊಂಡಿವೆ ಎಂದು ತಿಳಿಸಿದರೆ ವಿಗ್ರಹರಾಧನೆಯನ್ನು ವಿರೋಧಿಸುವವರೂ ಸಹ ವಿರೋಧಿಸದೇ ಅರ್ಥ ಮಾಡಿಕೊಳ್ಳಬಲ್ಲರೆಂದು ತಿಳಿಸುತ್ತಿದ್ದೇವೆ.

# 16. ನವಿಲುಗರಿ

ಈಗ ಶ್ರೀಕೃಷ್ಣನ ದೇವಾಲಯಕ್ಕೆ ಬರೋಣ. ಆ ದೇವಾಲಯದೊಳಗಿನ ಕೃಷ್ಣನ ಪ್ರತಿಮೆಯಲ್ಲಿ ಎಷ್ಟೋ ಜ್ಞಾನ ತುಂಬಿಕೊಂಡಿದೆ. ಕೃಷ್ಣನ ಪ್ರತಿಮೆಗೆ ತಲೆಯಲ್ಲಿ ನವಿಲುಗರಿಯನ್ನು ಅಳವಡಿಸಲಾಗಿದೆ. ನವಿಲುಗರಿಯನ್ನು ಕೃಷ್ಣನು ಅಂದಕ್ಕಾಗಿಯೋ, ಅಲಂಕಾರಕ್ಕಾಗಿಯೋ ಧರಿಸಲಿಲ್ಲ. ತಾನಿರುವಸ್ಥಿತಿ ಇದು ಎಂದು ತಿಳಿಸುತ್ತಾ, ನೀವೂ ಸಹ ಈ ರೀತಿಯಲ್ಲಿಯೇ ಇರಬೇಕೆಂದು ತಿಳಿಸುತ್ತ ನವಿಲುಗರಿ ಧರಿಸಿದ್ದಾನೆ. ವಿಶೇಷವೇನೆಂದರೆ,! ಗರಿಯ ಒಂದು ಮಧ್ಯಭಾಗ ನೀಲಿ ಬಣ್ಣದಿಂದ ಸ್ವಲ್ಪ ದುಂಡಾಗಿರುತ್ತದೆ. ಈ ಭಾಗವು ಗರಿಯಲ್ಲಿ ಎಲ್ಲಾ ಬಣ್ಣಗಳಿಗಿಂತಲೂ ಮುಖ್ಯವಾಗಿ ತಿಳಿಯುವಂತಿರುತ್ತದೆ. ಅದರ ಸುತ್ತಲೂ ಹೊಳೆಯುವಂತಹ ಎಲೆಯ ಹಸಿರು ಬಣ್ಣ ಇರುತ್ತದೆ. ಅದರ ನಂತರ ಸ್ವಲ್ಪ ಗೋಧಿ ಬಣ್ಣವಿರುವ ಆಕಾರ ಸುತ್ತಲೂ ಇರುತ್ತದೆ. ಈ ಗೋದಿ ಬಣ್ಣದ ಸುತ್ತಲೂ ತುದಿಯಲ್ಲಿ ಪ್ರಕಾಶಮಾನವಾಗಿ ಹೊಳೆಯುತ್ತಿರುತ್ತದೆ. ಇದರ ಕೊನೆಯ ಅಂಚು, ಹೊಳಪು ನಂತರ ಸುತ್ತಲೂ ಗುರುತಿಸಲಾಗದಂತಹ ತೆಳುವಾಗಿ ಒಂದು ಬಣ್ಣದ ಭಾಗವಿರುತ್ತದೆ. ಹೀಗೆ ಗರಿಯಲ್ಲಿ ಒಟ್ಟಾಗಿ ನಾಲ್ಕು ಭಾಗಗಳಿರು ವಂತೆ ಗುರುತು ತಿಳಿಯುತ್ತಿದೆ. ನೀವು ಒಂದು ಗರಿಯನ್ನು ಸಂಪಾದಿಸಿ ಕೊಂಡು ಚೆನ್ನಾಗಿ ನೋಡಿ ಗುರುತಿಸಿರೆಂದು ಕೋರುತ್ತಿದ್ದೇವೆ. ಮುಖ್ಯಭಾಗವಾದ ಮಧ್ಯದಲ್ಲಿರುವುದು ಕಪ್ಪು ಬಣ್ಣದಿಂದ ಕೂಡಿದ ನೀಲಿ ಬಣ್ಣವಾಗಿರುತ್ತದೆ. ಎರಡನೆಯದು ದುಂಡಾಗಿ ಹೊಳಪಿರುವ ಎಲೆ ಹಸಿರು ಭಾಗ, ಮೂರನೆಯದು

ತೆಳುವಾದ ಗೋಧಿ  ಬಣ್ಣ, ನಾಲ್ಕನೆಯದು ಗಮನಿಸಲಾಗದಂತಹ ಒಂದು ಭಾಗವಿರುತ್ತದೆ. ನಾಲ್ಕನೆಯದರ ತುದಿಯ ಅಂಚು ಸಹ ಮೂರನೆಯದರ ಅಂಚಿನಂತೆ ಸ್ವಲ್ಪ  ಹೊಳೆಯುತ್ತಿರುತ್ತದೆ. ಆದ್ದರಿಂದ ನಾಲ್ಕನೆಯ ಭಾಗವನ್ನು ಸಹ ಕಷ್ಟವಿಲ್ಲದೇ ಗುರುತಿಸಬಹುದು. ಹೊರಗಿನಿಂದ ಮೂರು ದುಂಡಾಗಿರುವ ಭಾಗಗಳು ಇದ್ದು  ಮಧ್ಯದಲ್ಲಿ ಕಣ್ಣಾಗಿ, ಕೇಂದ್ರವಾಗಿರುವ ನವಿಲುಗರಿಯನ್ನು ಬ್ರಹ್ಮವಿದ್ಯೆಯಾದ ಗೀತಾಶಾಸ್ತ್ರವನ್ನು ತಿಳಿಸಿದ ಕೃಷ್ಣನು ಧರಿಸಿರುವುದು ಬಹು ದೊಡ್ಡ ಅರ್ಥವಾಗಿರುತ್ತದೆ.

ನಮ್ಮ ಶರೀರಗಳಲ್ಲಿ ಶಿರೋಭಾಗದಲ್ಲಿ ಗುಣಗಳು ಇವೆ. ಶರೀರ ಕಾರ್ಯಗಳಿಗೆಲ್ಲ ಕಾರಣವಾದ ಗುಣಗಳು ಒಂದು ಪದ್ಧತಿಯಾಗಿ ಜೋಡಿಸಲ್ಪಟ್ಟಿವೆ. ಆ ಪದ್ಧತಿ ಒಂದು ಚಕ್ರವಾಗಿ ಹೊಂದಿಸಲ್ಪಟ್ಟಿವೆ. ಗುಣಗಳು ಮೂರು ವಿಧವಾಗಿ ವಿಭಜಿಸಲ್ಪಟ್ಟಿವೆ. ಸಾತ್ತ್ವಿಕ, ರಾಜಸ, ತಾಮಸವೆಂದು ಕರೆಯುವ ಗುಣವಿಧಗಳು ಚಕ್ರದಲ್ಲಿ ಮೂರು ಭಾಗಗಳಾಗಿ ಜೋಡಣೆಯಾಗಿವೆ. ಅದನ್ನೇ ಸಾತ್ತ್ವಿಕ ಭಾಗ,



(ನವಿಲುಗರಿ)

ರಾಜಸ ಭಾಗ, ತಾಮಸ ಭಾಗವೆಂದು ಹೆಸರುಗಳನ್ನಿಡಲಾಗಿದೆ. ಈ ಮೂರು ಭಾಗಗಳಿಗೂ ಮಧ್ಯ ದುಂಡಾಗಿರುವ ಒಂದು ಭಾಗವಿದೆ ಅದೇ ಬ್ರಹ್ಮನಾಡಿ. ಅಲ್ಲಿ ಆತ್ಮ ನಿವಾಸವಾಗಿರುತ್ತದೆ. ಆತ್ಮ ನಿವಾಸವಾದ ಬ್ರಹ್ಮನಾಡಿಯನ್ನು ಆಧಾರ ಮಾಡಿಕೊಂಡು ಕಣ್ಣಿಗೆ ಕಾಣಿಸದ ಗುಣ ಚಕ್ರ ಜೋಡಣೆಯಾಗಿದೆ. ಸರ್ವಜೀವಿಗಳು ಗುಣ ಚಕ್ರಗಳಲ್ಲಿ ಸಿಲುಕಿಕೊಂಡು ಇವೆ. ಯಾವ ಭಾಗದಲ್ಲಿ ಹೆಚ್ಚಾಗಿ ಇರುವನೋ ಆ ಜೀವಿಗೆ ಆ ಭಾಗದ ಒಂದು ಹೆಸರು ಇಡುವುದು ನಡೆಯುತ್ತಿತ್ತು ಎಂದು ದೊಡ್ಡವರು ತಿಳಿಸಿದ್ದಾರೆ. ತಾಮಸ ಗುಣಭಾಗದಲ್ಲಿರುವ ಜೀವಿಯನ್ನು ತಾಮಸನೆಂದು, ರಾಜಸ ಗುಣಭಾಗದಲ್ಲಿರುವ ಜೀವಿಯನ್ನು ರಾಜಸನೆಂದು ಹಾಗೆ ಸಾತ್ತ್ವಿಕ ಭಾಗದಲ್ಲಿರುವವನಿಗೆ ಸಾತ್ತ್ವಿಕನೆಂದು ಹೇಳುವುದು ನಡೆಯುತ್ತಿದೆ. ಯಾವ ಗುಣಭಾಗದಲ್ಲಿದ್ದರೂ ಪ್ರತಿ ಜೀವರಾಶಿಯನ್ನು ಆತ್ಮ ನೋಡುತ್ತಿರುತ್ತದೆ. ಆದ್ದರಿಂದ ಆತ್ಮವೇ ಸಾಕ್ಷಿಯಾಗಿದೆ. ಆತ್ಮನಿಗೆ ತಿಳಿಯದ ಜೀವರಾಶಿ ಇಲ್ಲ. ಎಲ್ಲಾ ಜೀವರಾಶಿಗಳ ಗುಣಚಕ್ರದ ಮಧ್ಯ ಭಾಗದಲ್ಲಿರುವ ಆತ್ಮದ ಸುತ್ತಲೂ ಇರುವ ಗುಣಗಳಿಂದ ಸಂಬಂಧವಿಲ್ಲದೇ ಸಾಕ್ಷಿಯಾಗಿ ನೋಡುತ್ತಾ ಇದೆ.

ಪ್ರತಿ ಜೀವರಾಶಿಯೂ ಗುಣಗಳಿಂದ ಕೆಲಸಗಳನ್ನು ಮಾಡುತ್ತಿವೆ. ಕೆಲಸಗಳಿಂದ ಆಯಾ ಜೀವಿಗಳಿಗೆ ಪಾಪ ಪುಣ್ಯಗಳು ಸಂಭವಿಸುತ್ತಿವೆ. ಕರ್ಮಗಳಾದ ಪಾಪ ಪುಣ್ಯಗಳು ಜೀವಾತ್ಮಗಳಿಗೇ ಹೊರತು ಮಧ್ಯದಲ್ಲಿರುವ ಆತ್ಮನಿಗೆ ಅಂಟುವುದಿಲ್ಲ. ಆತ್ಮ ಶಕ್ತಿಯೇ ಶರೀರವೆಲ್ಲ ವ್ಯಾಪಿಸಿಕೊಂಡು ಚಲನ ಶಕ್ತಿಯನ್ನು ಕೊಡುತ್ತಿದ್ದರೂ ಪ್ರತಿ ಜೀವರಾಶಿಯ ಚಲನೆಗಳು ಗುಣಗಳನ್ನು ಅನುಸರಿಸಿಕೊಂಡು ಇರುತ್ತವೆ. ಆದ್ದರಿಂದ ಆತ್ಮ ಕಾರಣವಾದ ಶಕ್ತಿಯೇ ಹೊರತು, ಕಾರ್ಯವಾದ ಕರ್ಮವಲ್ಲ. ಶರೀರದಲ್ಲಿ ಗುಣಗಳ ಆದೇಶದ ಪ್ರಕಾರ ವಿವಿಧ ಕೆಲಸಗಳು ನಡೆದರೂ ಯಾವ ವಿಧವಾದ ಕಾರ್ಯ ಸಂಬಂಧವೂ ಇಲ್ಲದೇ ಯಾವ ಕರ್ಮವನ್ನೂ ಅಂಟದೇ ಆತ್ಮ ಎಲ್ಲ ಶರೀರಗಳಲ್ಲಿಯೂ ಸಾಕ್ಷಿ ಭೂತವಾಗಿದೆ.

ನವಿಲುಗರಿಯ ಒಂದು ಮಧ್ಯಭಾಗವು ಗುಣಚಕ್ರದಲ್ಲಿ ಮಧ್ಯದಲ್ಲಿರುವ ಆತ್ಮದ ನಿವಾಸ ಸ್ಥಾನವಾಗಿದೆ. ಅದಕ್ಕೆ ಸುತ್ತಲೂ ಇರುವ ಎರಡನೆಯ ಭಾಗ ಗುಣಚಕ್ರದಲ್ಲಿ ಸಾತ್ತ್ವಿಕಭಾಗ, ಅದಕ್ಕೆ ಸುತ್ತಲು ಇರುವ ಮೂರನೆಯ ಸ್ಥಾನ ರಾಜಸ ಭಾಗ. ಹಾಗೆಯೇ ಕೊನೆಯ ನಾಲ್ಕನೆಯ ಭಾಗ ತಾಮಸ ಭಾಗ. ಈ ವಿಧವಾಗಿ ನವಿಲುಗರಿ ಗುಣಚಕ್ರದ ಸಮಾನ ಹೋಲಿಕೆಗಳಿವೆ. ಕೃಷ್ಣನು ಕೆಲಸಗಳನ್ನು ಮಾಡುತ್ತಿದ್ದರೂ ನನಗೆ ಯಾವ ಗುಣಕರ್ಮಗಳೂ ಅಂಟುವುದಿಲ್ಲ, ಮೂರು ಗುಣಗಳ ಮಧ್ಯ ಆತ್ಮನಾಗಿದ್ದೇನೆಂದು ತಿಳಿಸುವ ಸಲುವಾಗಿ ಮೂರು ಭಾಗಗಳಿಗೂ ಮಧ್ಯದಲ್ಲಿ ಗುರುತಿಗಾಗಿ ಕಾಣಿಸುವ ಆಕಾರವಿರುವ ನವಿಲುಗರಿಯನ್ನು ತಲೆಯ ಮೇಲೆ ಧರಿಸಿದ್ದಾನೆ. ಅಷ್ಟೇ ಅಲ್ಲದೆ ಎಲ್ಲರಲ್ಲಿಯೂ ಮೂರು ಗುಣಗಳಿಗೂ ಆತ್ಮ ಸಾಕ್ಷಿಯಾಗಿ ಇದ್ದಾನೆಂಬ ಭಾವನೆಯಿಂದ ಕೃಷ್ಣನು ಗರಿಯನ್ನು ಧರಿಸುವುದು ನಡೆದಿದೆ.

ನಮ್ಮ ಶರೀರದಲ್ಲಿನ ಬ್ರಹ್ಮನಾಡಿಯಲ್ಲಿ ಆತ್ಮನಿವಾಸವಾಗಿದೆ. ಆ ನಾಡಿ ಶಿರಸ್ಸಿನಿಂದ ಹಿಡಿದು ಗುದಸ್ಥಾನದವರೆಗೂ ವ್ಯಾಪಿಸಿಕೊಂಡಿದೆ. ಬೆನ್ನು ಮೂಳೆಯ ಮಧ್ಯದಲ್ಲಿ ವ್ಯಾಪಿಸಿಕೊಂಡಿರುವ ಬ್ರಹ್ಮನಾಡಿಯಿಂದ ಆತ್ಮಶಕ್ತಿ ಪ್ರಸಾರವಾಗುವುದಕ್ಕೆ ಎರಡು ಕಡೆಗಳಲ್ಲಿಯೂ ಸಣ್ಣ ಸಣ್ಣ ನರಗಳು ಹೊರಬಿದ್ದಿವೆ. ಬ್ರಹ್ಮನಾಡಿ ಶಕ್ತಿಗೆ ನಿಲಯವಾಗಿರುವುದಾದರೆ ಆ ಶಕ್ತಿಯನ್ನು ಗುಣಗಳು ಉಪಯೋಗಿಸಿ ಕೊಳ್ಳುತ್ತಿವೆ. ಮೇಲಿರುವ ಗುಣಚಕ್ರದಿಂದ ಬರುವ ಆದೇಶಗಳು ಮಧ್ಯದಲ್ಲಿರುವ ಬ್ರಹ್ಮನಾಡಿಯ ಮೂಲಕವೇ ಬರಬೇಕು. ಹಾಗೆಯೇ ಹೊರಗಿನ ಇಂದ್ರಿಯಗಳಿಂದ ಬರುವ ವಿಷಯಗಳೆಲ್ಲ ಸಣ್ಣನರಗಳ ಮೂಲಕ ಬ್ರಹ್ಮನಾಡಿ ಸೇರಿ, ಅಲ್ಲಿಂದ ಪ್ರಯಾಣಿಸಿ ಗುಣಚಕ್ರದಲ್ಲಿರುವ ಜೀವಿಗೆ ಸೇರುತ್ತಿವೆ. ಈ ಸಣ್ಣ ನರಗಳ ಜೋಡಣೆ, ಬ್ರಹ್ಮನಾಡಿ ಜೋಡಣೆ ಮತ್ತು ಮೇಲೆ ಇರುವ ಗುಣಚಕ್ರವೊಂದರ ಜೋಡಣೆ ನವಿಲುಗರಿಯನ್ನು ಗಮನಿಸಿದಾಗ ಚೆನ್ನಾಗಿ ತಿಳಿಯುತ್ತದೆ. ಗರಿಯ ಕೆಳಭಾಗದಲ್ಲಿ ಕಾಂಡದಪ್ಪವಾಗಿ ಬಿಳುಪಿನಿಂದ ಉದ್ದವಾಗಿ ಇರುತ್ತದೆ. ಅದು ಬ್ರಹ್ಮನಾಡಿಯಾಗಿ ಅರ್ಥ ಮಾಡಿಕೊಳ್ಳಬೇಕು. ಆ ಉದ್ದನೆಯ ಕಾಂಡದ ಎರಡುಕಡೆ ಸಣ್ಣ ಸಣ್ಣ

ಗರಿಗಳು ಪಕ್ಕಕ್ಕೆ ವ್ಯಾಪಿಸಿಕೊಂಡಿರುತ್ತವೆ. ಅವುಗಳನ್ನು ಬ್ರಹ್ಮನಾಡಿಯಿಂದ ಹೊರಟಿರುವ ಸಣ್ಣ ಸಣ್ಣ ನರಗಳಾಗಿ ಲೆಕ್ಕ ಲೆಕ್ಕಿಸಿಕೊಳ್ಳಬೇಕು. ಮೇಲ್ಭಾಗದಲ್ಲಿರುವ ನಾಲ್ಕು ಭಾಗಗಳಾಗಿ ಕಾಣಿಸುವ ಗರಿಯು ಗುಣಚಕ್ರವಾಗಿ ಲೆಕ್ಕಿಸಿಕೊಳ್ಳಬೇಕು.

1) ಸರ್ವ ಜೀವಿಗಳ ಶರೀರದಲ್ಲಿಯೂ ಈ ವಿಧವಾದ ಜೋಡಣೆ ಇದೆಯೆಂದು ಜ್ಞಾನ ತಿಳಿಸುವ ಉದ್ದೇಶದಿಂದಲೇ ಶ್ರೀ ಕೃಷ್ಣನು ಗರಿ ಧರಿಸಿದ್ದಾನೆ. 2) ಸರ್ವ ಜೀವಿಗಳ ಗುಣಗಳಿಗೆ ಆತ್ಮ ಸಾಕ್ಷಿಯಾಗಿದೆ ಎಂದು ಸೂಚಿಸುವ ಉದ್ದೇಶದಿಂದಲೇ ಶ್ರೀ ಕೃಷ್ಣನು ಗರಿ ಧರಿಸಿದ್ದಾನೆ. 3) ಆತ್ಮ ಮೂರು ಗುಣಗಳಿಗೆ ಮಧ್ಯದಲ್ಲಿದ್ದು ಯಾವ ಗುಣದೊಂದಿಗೂ ಸಂಬಂಧವಿಲ್ಲದೆ ಇದೆಯೆಂದು ತಿಳಿಸುವ ಉದ್ದೇಶದಿಂದಲೇ ಗರಿಯನ್ನು ಧರಿಸಿದ್ದಾನೆ. 4) ನಾನು ಯಾವ ಕೆಲಸಗಳನ್ನು ಮಾಡುತ್ತಿದ್ದರೂ ಮಧ್ಯದಲ್ಲಿರುವ ನನಗೆ ಅಂಟುವುದಿಲ್ಲವೆಂದು ತಿಳಿಸುವುದಕ್ಕೇ ಗರಿ ಇಟ್ಟಿದ್ದಾನೆ. 5) ಸರ್ವ ಜೀವಿಗಳ ತಲೆಗಳಲ್ಲಿಯೇ ಗುಣಗಳಿವೆ, ಆತ್ಮವಿದೆ ಎಂದು ತಿಳಿಸುವ ಉದ್ದೇಶದಿಂದಲೇ ತಲೆಯ ಮೇಲೆಯೇ ಗರಿ ಧರಿಸಿದ್ದಾನೆ. 6) ತುದಿಯ ಅಂಚಿನ ಬಣ್ಣ ತಿಳಿಯಾಗಿರುತ್ತದೆ. ಎರಡನೆಯದು ಅದಕ್ಕಿಂತಲೂ ಹೆಚ್ಚಾಗಿ ಕಾಣಿಸುವಂತಿದೆ. ಮೂರನೆಯದು ಅದಕ್ಕಿಂತಲೂ ಮತ್ತಷ್ಟು ಹೆಚ್ಚಾಗಿ ಕಾಣಿಸುತ್ತಿದೆ. ನಾಲ್ಕನೆಯದು ಎಲ್ಲಕ್ಕಿಂತಲೂ ಹೆಚ್ಚಾಗಿ ಕಾಣಿಸುವ ಕಣ್ಣಾಗಿದೆ. ಅಂತಹ ಗರಿಯನ್ನು ಧರಿಸುವುದು ಯಾವ ಜೀವರಾಶಿಯಾದರೂ ಕೊನೆಗೆ ಸೇರಬೇಕಾಗಿರುವ ಸ್ಥಾನ ಇದೇಯೆಂದು ತಿಳಿಸುವುದೇ ಎಂದು ತಿಳಿದುಕೊಳ್ಳಬೇಕು. 7) ಗುಣ ಚಕ್ರ ರಹಸ್ಯವನ್ನು ತಿಳಿದವರು ನನ್ನ ಹಾಗೆ ಇರುವವರೆಂದು ನನಗೆ ಸಮಾನರಾದವರೆಂದು ತಿಳಿಸುವ ಉದ್ದೇಶದಿಂದಲೇ ಶ್ರೀಕೃಷ್ಣನು ಗರಿ ಧರಿಸಿದ್ದಾನೆ. 8) ಗೀತೆಯ ಕರ್ಮಯೋಗವೆಂಬ ಅಧ್ಯಾಯ 28ನೆಯ ಶ್ಲೋಕವು "ತತ್ವವಿತ್ತು ಮಹಾಬಾಹೋ ಗುಣ ಕರ್ಮ ವಿಭಾಗಯೋಃ ಗುಣಾಗುಣೇಷು ವರ್ತಂತ ಇತಿ ಮತ್ವಾನ ಸಜ್ಜತೇ" ಗುಣಕರ್ಮಗಳ ಭಾಗಗಳನ್ನು ತಿಳಿದವನು ಆತ್ಮನನ್ನು ತಿಳಿದವನಾಗುತ್ತಾನೆ. ಅಂತಹವನು ಗುಣಗಳಿಂದ ನಡೆಯುವ ಇಂದ್ರಿಯ ಕೆಲಸಗಳು ಎಷ್ಟು ಮಾಡುತ್ತಿದ್ದರೂ ಮಾಡದಿರುವವನೇ ಎಂದು ತಿಳಿಸುವ ಸಲುವಾಗಿಯೇ

**ಕೃಷ್ಣನು ನವಿಲುಗರಿ ಧರಿಸಿದ್ದಾನೆ. ಕೃಷ್ಣನು ಧರಿಸಿರುವ ಒಂದು ನವಿಲು ಗರಿಯಲ್ಲಿಯೇ ಇಷ್ಟೊಂದು ಆತ್ಮಜ್ಞಾನ ತುಂಬಿಕೊಂಡಿದೆ ಎಂದು ನಮಗೆ ಇಲ್ಲಿಯವರೆಗೂ ತಿಳಿಯದೇ ಇರುವುದು ದುರದೃಷ್ಟಕರ.**

# 17. ಮುರಳಿ

ಎಲ್ಲರ ಶರೀರಗಳಿಗೂ 9 ರಂಧ್ರಗಳಿವೆ. ಕಣ್ಣುಗಳು ಎರಡು, ಕಿವಿಗಳು ಎರಡು, ಮೂಗಿನ ರಂಧ್ರಗಳು ಎರಡು, ಬಾಯಿ ಒಂದು, ಗುದ ಒಂದು, ಗುಹ್ಯ ಒಂದು. ಒಟ್ಟಾರೆ ಸರ್ವ ಜೀವಿಗಳ ಶರೀರಗಳಿಗೂ 9 ರಂಧ್ರಗಳಿರುತ್ತವೆ. ಆದ್ದರಿಂದ ಕೆಲವರು ಹಿರಿಯರು ಒಂಭತ್ತು ರಂಧ್ರಗಳ ಹುತ್ತವೆಂದು ಶರೀರವನ್ನು ವರ್ಣಿಸಿ ಅದರಲ್ಲಿ ಜೀವಿಯು ಹಾವಾಗಿ ವಾಸಿಸುತ್ತಿದ್ದಾನೆ ಎಂದಿದ್ದಾರೆ. ಹುತ್ತದೊಳಗಿನ ಹಾವು ಹೊರಗಡೆ ತಿಳಿಯುವುದಿಲ್ಲ. ಆದ್ದರಿಂದ ಯಾವ ಹುತ್ತದಲ್ಲಿ ಯಾವ ಹಾವು ಇರುತ್ತದೋ ಎಂದು ಯಾವ ಶರೀರದಲ್ಲಿ ಯಾವ ಜೀವಿ ಇದ್ದಾನೋ ಎಂದು ಅರ್ಥ ಬರುವಂತೆ ಹೇಳಿದ್ದಾರೆ.

ಕೊಳಲಿಗೂ ಸಹ ಒಂಭತ್ತು ರಂಧ್ರಗಳಿರುತ್ತವೆ. ಕೊಳಲನ್ನು ಜೀವಿಗಳ ಶರೀರಗಳೊಂದಿಗೆ ಹೋಲಿಸಬಹುದು. ಶರೀರಗಳಿಗೆ ಇರುವ ನವರಂಧ್ರಗಳಂತೆ ಮುರಳಿಗೂ ಸಹ ಒಂಬತ್ತು ರಂಧ್ರಗಳು ಇರುತ್ತವೆ. ಆದ್ದರಿಂದ ಜೀವಿಗಳ ಶರೀರಗಳೆಲ್ಲವೂ ನನ್ನ ಕೈಯಲ್ಲಿವೆ ಎಂದು ತಿಳಿಸುವ ಸಲುವಾಗಿ ಕೃಷ್ಣನು ಮುರಳಿಯನ್ನು ಎಲ್ಲ ವೇಳೆಗಳಲ್ಲಿಯೂ ತನ್ನ ಕೈಯಲ್ಲಿ ಹಿಡಿದುಕೊಂಡಿರುತ್ತಾನೆ. ಶರೀರಗಳು ಸ್ವತಂತ್ರಗಳಲ್ಲವೆಂದು ದೇವರ ಕೈಯಲ್ಲಿ ಕೀಲುಗೊಂಬೆಗಳೆಂದು ಇದರಿಂದ ತಿಳಿದು ಬರುತ್ತದೆ. ಜೀವಿಗಳ ಶರೀರಗಳು ಪ್ರಕೃತಿಯಿಂದ ತಯಾರಾಗಿವೆ. ಆ ಪ್ರಕೃತಿಯನ್ನೇ ದೇವರ ತನ್ನ ಅಧೀನದಲ್ಲಿಟ್ಟುಕೊಂಡಿದ್ದಾನೆ.

ಅಜ್ಞಾನವನ್ನು ತೆಗೆದು ಜ್ಞಾನವನ್ನುಂಟುಮಾಡುವುದೇ ಶ್ರೀ ಕೃಷ್ಣನ ಒಂದು ಜನ್ಮ ರಹಸ್ಯವಾಗಿದೆ. ಆದ್ದರಿಂದ ತನ್ನ ಕೊಳಲನ್ನು ಜೀವಿಗಳ

ಶರೀರಗಳಾಗಿ ಹೋಲಿಸಿ ತೋರಿಸುತ್ತ, ಅದರಿಂದ ಸಂಗೀತವನ್ನು ನುಡಿಸುತ್ತಿದ್ದಾನೆ. ನವ ರಂಧ್ರಗಳಿರುವ ಪಿಳ್ಳಂಗೋವಿಯನ್ನು ತನ್ನ ಬಾಯಿಯಿಂದ ಊದುತ್ತ ಅದರಿಂದ ಒಂದು ಶಬ್ಧ ಹುಟ್ಟುವಂತೆ ಮಾಡುತ್ತಿದ್ದಾನೆ. ಆ ಶಬ್ಧವು ಲಯಬದ್ಧವಾಗಿ ಮುರಳಿಯಿಂದ ಹೊರಗೆ ಬಂದು ಸ್ವಲ್ಪ ದೂರದವರೆಗೂ ಕೇಳಿಸುತ್ತಾ ಹೋಗಿ ಲಯವಾಗುತ್ತದೆ. ಒಂಭತ್ತು ರಂಧ್ರಗಳಿರುವ ಮುರಳಿಯನ್ನು ಬಾಯಿಯಿಂದ ಊದುತ್ತ ಸಂಗೀತವನ್ನು ಹುಟ್ಟಿಸುವುದೂ ಸಹ ಆತ್ಮಜ್ಞಾನವೇ ಎಂದು ತಿಳಿದುಕೊಳ್ಳಬೇಕು. ಇದರಲ್ಲಿ ಯಾವ ಜ್ಞಾನವಿದೆ ಎಂದು ಕೆಲವರಿಗೆ ಅನುಮಾನ  ಬರಬಹುದು. ಅದಕ್ಕೆ ಸಮಾಧಾನವೇನೆಂದರೆ !



**(ಮುರಳಿ)**

ಪ್ರತಿ ಮಾನವನು ಅಜ್ಞಾನದಿಂದ ಜ್ಞಾನದ ಕಡೆಗೆ ಸೇರಬೇಕಾಗಿದೆ. ಹಾಗೆ ಜ್ಞಾನವನ್ನು ಹೊಂದಬೇಕೆಂದರೆ ಒಬ್ಬ ಗುರುವಿನ ಅವಶ್ಯಕತೆ ಇದೆ. ಗುರು ಮುಖಾಂತರ ಬರುವ ಬೋಧನೆಯ ಮೂಲಕ ಅಜ್ಞಾನಿ ಜ್ಞಾನಿಯಾಗಿ ಪರಿವರ್ತನೆಯಾಗಬಲ್ಲ. ಜ್ಞಾನಿಯಾಗಿ ಪರಿವರ್ತನೆಯಾದವನು ಯೋಗಿಯಾಗಿ ಪರಮಾತ್ಮನಲ್ಲಿ ಐಕ್ಯವಾಗುತ್ತಿದ್ದಾನೆ. ನವರಂಧ್ರಗಳಿರುವ ಮುರಳಿ ನವರಂಧ್ರಗಳಿರುವ ಶರೀರವೆಂದು ತಿಳಿಯಬೇಕು. ಮುರಳಿಯನ್ನು ಊದುವವನು ಕೃಷ್ಣನಾದರೆ, ಶರೀರಗಳಿಗೆ ಜ್ಞಾನವನ್ನು ಊದುವವನು ಗುರು. ಮುರಳಿಯಿಂದ ಮೊಳಗಿಸುವುದು ಸಂಗೀತವಾದರೆ ಶರೀರ ಧರಿಸಿರುವ ಜೀವಿಗೆ ಗುರುವಿನ ಅವಶ್ಯಕತೆ ಇದೆ.

ಗುರುವಿನ ಮೂಲಕವೇ ಜ್ಞಾನ ಹೊಂದಬೇಕೆಂಬ ಸೂಚನೆಯಾಗಿ ಕೃಷ್ಣನು ಮುರಳಿಯನ್ನು ಊದುತ್ತಿದ್ದಾನೆ. ಮುರಳಿಯನ್ನು ಊದಿದಾಗ ಹೊರಬೀಳುವ ಶಬ್ಧವು ಗುರು ಜ್ಞಾನಶಕ್ತಿಯನ್ನು ಕೊಟ್ಟಾಗ ಹೊರಬೀಳುವ ಕರ್ಮಗಳೆಂದು ತಿಳಿಯಬೇಕು. ಶಬ್ಧವು ಸ್ವಲ್ಪ ದೂರ ಪ್ರಯಾಣಿಸಿ ಶೂನ್ಯದಲ್ಲಿ ತೇಲಿ ಹೋದಂತೆ ಕರ್ಮ ಎಂಬ ಶಬ್ಧವು ನಶಿಸಿದೊಡನೆಯೇ ಜೀವಿಯೂ ಸಹ ಶೂನ್ಯವಾದ ಪರಮಾತ್ಮನಲ್ಲಿ ಸೇರಿ ಹೋಗುತ್ತಾನೆಂಬಂತೆ ಕೃಷ್ಣನು ಮುರಳಿಯನ್ನು ನುಡಿಸಿದ್ದಾನೆ.

ಜ್ಞಾನವು ಶಾಸ್ತ್ರಬದ್ಧವಾದುದು, ಹಾಗೆಯೇ ಸಂಗೀತವೂ ಸಹ ಲಯ ಬದ್ಧವಾದುದು. ಊದುವವನು ಇಲ್ಲದೆ ಹೋದರೆ ಮುರಳಿಯಲ್ಲಿ ಸಂಗೀತವು ಮೊಳಗುವುದಿಲ್ಲ. ಹಾಗೆಯೇ ಗುರುವು ಇಲ್ಲದೆ ಹೋದರೆ ಜ್ಞಾನ ಲಭಿಸುವುದಿಲ್ಲ. ಶಬ್ಧ ಹೊರಬಂದ ನಂತರವೇ ಶೂನ್ಯದಲ್ಲಿ ಬೆರೆತು ಹೋಗುತ್ತದೆ. ಹಾಗೆ ಜ್ಞಾನ ಉಂಟಾಗಿ ಯೋಗಿಯಾದವನೇ ಪರಮಾತ್ಮನಲ್ಲಿ ಸೇರಿ ಹೋಗುತ್ತಾನೆಂದು ತಿಳಿಸುವ ಉದ್ದೇಶವೇ ಮುರಳಿಯನ್ನು ಕೃಷ್ಣನು ತೋರಿಸಿದ್ದಾನೆ.

# 18. ಪಾದಗಳು

ಕೃಷ್ಣನು ಎಲ್ಲಿಯಾದರೂ ನಿಂತು ಇರುವಂತೆಯೇ ಕಾಣಿಸುತ್ತಾನೆ. ಎಲ್ಲಿ ನಿಂತಿದ್ದರೂ ಒಂದು ಪಾದವನ್ನು ಪೂರ್ತಿ ಭೂಮಿಯ ಮೇಲೆ ಹೋರಿಸಿ, ಒಂದು ಪಾದವನ್ನು ಭಾರಬಿಡದೆ ಸುಮ್ಮನೆ ತಾಕಿಸಿರುತ್ತಾನೆ. ಕೃಷ್ಣನ ಶರೀರದ ಭಾರವೆಲ್ಲವನ್ನು ಒಂದು ಪಾದವು ಹೆಚ್ಚಾಗಿ ಒಂದು ಪಾದವು ಕಡಿಮೆಯಾಗಿ ಹೋರುತ್ತಿದೆಯೆಂದು ತಿಳಿಯುತ್ತಿದೆ. ಕೃಷ್ಣನ ಎರಡು ಪಾದಗಳು ಸರ್ವ ಜೀವಿಗಳ ಶರೀರಗಳಲ್ಲಿರುವ ಎರಡು ಶ್ವಾಸಗಳಾಗಿ ಗುರುತಿಸಬೇಕು. ನಮ್ಮ ಶರೀರದಲ್ಲಿ ಎರಡು ಮೂಗಿನ ರಂಧ್ರಗಳಲ್ಲಿ ಆಡುವ ಶ್ವಾಸ ಒಂದು ಹೆಚ್ಚಾಗಿ ಒಂದು ಕಡಿಮೆಯಾಗಿ ಆಡುತ್ತಿರುತ್ತವೆ. ಬಲ ಮೂಗಿನ ರಂಧ್ರದಲ್ಲಿ ಹೆಚ್ಚಿನ ಶ್ವಾಸ ಬಂದರೆ ಎಡ ಮೂಗಿನ ರಂಧ್ರದಲ್ಲಿ ಕಡಿಮೆ ಬರುತ್ತಿರುತ್ತದೆ. ಒಂದು ಸಮಯದಲ್ಲಿ

ಎಡಭಾಗದ ರಂಧ್ರದಲ್ಲಿ ಹೆಚ್ಚಾಗಿ ಬಂದರೂ ಬಲ ಮೂಗಿನ ರಂಧ್ರದಲ್ಲಿ ಕಡಿಮೆ ಬರುತ್ತಿರುತ್ತದೆ. ಈ ವಿಧವಾಗಿ ಬರುವುದಕ್ಕೆ ಕಾರಣವೇನೆಂದರೆ ಶರೀರದೊಳಗಿನ ಸೂರ್ಯ ಚಂದ್ರ ನಾಡಿಗಳ ಮೇಲೆ ಮನಸ್ಸು ಬದಲಾ ಗುತ್ತಿರುತ್ತದೆ. ಸೂರ್ಯ ನಾಡಿಯ ಮೇಲೆ ಮನಸ್ಸಿರುವಾಗ ಬಲ ರಂಧ್ರದಲ್ಲಿ, ಚಂದ್ರನಾಡಿಯಲ್ಲಿರುವಾಗ ಎಡ ರಂಧ್ರದಲ್ಲಿಯೂ ಶ್ವಾಸ ಹೆಚ್ಚಾಗಿ ಬರುತ್ತಿರುತ್ತದೆ. ಸೂರ್ಯ ಚಂದ್ರ ನಾಡಿಗಳ ಮೇಲೆ ಮನಸ್ಸಿರುವಾಗ ಮನುಷ್ಯ ಎಲ್ಲಾ ಕೆಲಸಗಳಲ್ಲಿ ಪ್ರಪಂಚದಲ್ಲಿ ಲೀನವಾಗುತ್ತಾನೆ. ಸೂರ್ಯ ಚಂದ್ರ ನಾಡಿಗಳ ಮೇಲೆ ಮನಸ್ಸು ಇಲ್ಲದಿರುವಾಗ ಮನುಷ್ಯ ಪ್ರಪಂಚದಿಂದ ಸಂಬಂಧವಿಲ್ಲದೆ ನಿದ್ರೆಯಲ್ಲಾಗಲೀ ಅಥವಾ ಯೋಗದಲ್ಲಾಗಲೀ ಲೀನವಾಗಿರುತ್ತಾನೆ.



**(ಪಾದಗಳು)**

ಸರ್ವ ಶರೀರಗಳಲ್ಲಿಯೂ ಶ್ವಾಸ ಎರಡು ಭಾಗಗಳಾಗಿದ್ದು ಒಂದು ಹೆಚ್ಚಾಗಿ ಒಂದು ಕಡಿಮೆ ಇದೆಯೆಂದು ಒಳಗಿನ ಮನಸ್ಸಿನ ಇರುವಿಕೆಯನ್ನು ತಿಳಿಸುತ್ತ ಕೃಷ್ಣನು ಒಂದು ಪಾದವನ್ನು ಪೂರ್ತಿಯಾಗಿ ಹೋರಿಸಿ ಒಂದು ಪಾದವನ್ನು ಸ್ವಲ್ಪವಾಗಿ ಹೋರಿಸಿದ್ದಾನೆ. ನಿಂತಿರುವ ಕೃಷ್ಣನು ಎಚ್ಚರದಿಂದ ಜಾಗ್ರತಾ ವಸ್ಥೆಯಲ್ಲಿದ್ದಾನೆ. ಆದ್ದರಿಂದ ಜಾಗ್ರತಾವಸ್ಥೆಯಲ್ಲಿಯೇ ಮನಸ್ಸು ಬಲ ಎಡ ನಾಡಿಗಳ ಮೇಲಕ್ಕೆ ಬದಲಾಗುತ್ತಾ ಇರುತ್ತದೆಂದು ತಿಳಿಯುತ್ತಿದೆ. ಜಾಗ್ರತಾ

ವಸ್ಥೆಯಲ್ಲಿ ಮನೋ ಗಮನ ಸ್ಥಾನಗಳನ್ನು ತಿಳಿಸುವ ನಿಮಿತ್ತವೇ ಕೃಷ್ಣನು ನಿಂತು ಪಾದಗಳನ್ನು ತೋರಿಸಿದ್ದಾನೆ. ಜಾಗ್ರತಾವಸ್ಥೆಯಲ್ಲಿ ಮನಸ್ಸಿನ ಗಮನ ತಿಳಿದವನು ನಿದ್ರೆಯಲ್ಲಿ ಮನೋ ಸ್ಥಾನವನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಾನೆ. ಹಾಗೆ ಮನಸ್ಸು, ನಿದ್ರೆ, ಜಾಗ್ರತೆಯಲ್ಲಿ ಎಲ್ಲಿರುವುದೋ ತಿಳಿದುಕೊಳ್ಳುವುದು ಜ್ಞಾನವಾಗುತ್ತದೆ. ಮನಸ್ಸು ಸೂರ್ಯಚಂದ್ರನಾಡಿಗಳಿಂದ ನಿದ್ರೆಯಲ್ಲಿ, ಬ್ರಹ್ಮನಾಡಿಯಲ್ಲಿ ಸೇರುತ್ತದೆಂದು ತಿಳಿದವನು ಆತ್ಮಜ್ಞಾನಕ್ಕೆ ಹತ್ತಿರವಾಗುತ್ತಾನೆ.

# 19. ಶರೀರದ ನೀಲಿ ಬಣ್ಣ

ಪರಮಾತ್ಮನು ಪ್ರಪಂಚವೆಲ್ಲಾ ವ್ಯಾಪಿಸಿದವನು, ಇಂದ್ರಿಯಗಳಿಗೆ ತಿಳಿಯದವನು, ಅನಂತವಾದ ಶಕ್ತಿ. ಅಂತಹದ್ದನ್ನು ಹೋಲಿಸಿ ಹೇಳುವುದಕ್ಕೆ ಪ್ರಪಂಚದಲ್ಲಿ ಹತ್ತಿರದ ಸಂಬಂಧವಿರುವುದು ಆಕಾಶವೇ. ಆಕಾಶ ಶೂನ್ಯವಾದುದು ಕಣ್ಣಿಗೆ ತಿಳಿಯುವುದಿಲ್ಲ. ಪ್ರಕೃತಿಯಲ್ಲಿ ಆಕಾಶ ಒಂದು ಭಾಗವಾದರೂ ಅದು ಪರಮಾತ್ಮನಲ್ಲದಿದ್ದರೂ, ಪರಮಾತ್ಮನ ವಿಷಯವನ್ನು ಹೋಲಿಸುವ ಸಮಯದಲ್ಲಿ ಬಯಲಾಗಿದೆ ಎಂದು, ಶೂನ್ಯವಾಗಿದೆ ಎಂದು ಹೇಳುತ್ತಿದ್ದೇವೆ. ಶೂನ್ಯಕ್ಕೂ ಸಹ ಒಂದು ಬಣ್ಣ ಇದೆ ಅದು ನೀಲಿ ವರ್ಣ. ಯಾವ ಬಣ್ಣವಾದರೂ ಒಂದು ವಸ್ತುವಿನ ಮೇಲೆ ಅಥವಾ ಪದಾರ್ಥದ ಮೇಲೆಯೋ ಇರುತ್ತದೆ. ಆದರೆ ಆಕಾಶ ನೀಲಿ ಯಾವ ಪರದೆಯ ಮೇಲೂ ಇಲ್ಲ. ಅದನ್ನು ಶೂನ್ಯದಲ್ಲಿ ಎಷ್ಟು ಹುಡುಕಿದರೂ ಇದ್ದಂತೆಯೇ ಇರುತ್ತದೆ. ಆದರೆ ಸಮೀಪಿಸಲಾರೆವು. ಆಕಾಶ ನೀಲಿ ವರ್ಣವಾಗಿದೆ. ಆದ್ದರಿಂದ ನಾನು ಸಹ ಅಂತ್ಯವಿಲ್ಲದ ಎಲ್ಲಾ ಕಡೆ ವ್ಯಾಪಿಸಿರುವ ಆಕಾಶದಂತೆ ಇದ್ದೇನೆಂದು ತಿಳಿಸುತ್ತಾ ಕೃಷ್ಣನು ನೀಲಿ ದೇಹ ಧರಿಸಿದ್ದಾನೆ. ಆಕಾಶಕ್ಕೆ ಅಂತ್ಯವಿಲ್ಲ, ಆದ್ದರಿಂದ ನಾನು ಅನಂತನೆಂದು ತಿಳಿಸುವ ಸಲುವಾಗಿಯೇ ಪರಮಾತ್ಮನ ಶರೀರ ನೀಲಿ ವರ್ಣವಾಗಿದೆ.

# 20. ಆರಾಧನೆ



ಇಲ್ಲಿಯವರೆಗೂ ದೇವಾಲಯದ ವಿಷಯಗಳನ್ನು ತಿಳಿದುಕೊಂಡಿದ್ದೇವೆ. ಈಗ ನಾವು ಆಚರಿಸುತ್ತಿರುವ ಭಕ್ತಿ, ಆಚರಿಸಬೇಕಾದ ಭಕ್ತಿ, ಆರಾಧನೆ ವಿಷಯಗಳನ್ನು ಕುರಿತು ತಿಳಿದುಕೊಳ್ಳೋಣ. ಈ ಕಾಲದ ಮಾನವರಲ್ಲಿ ಭಕ್ತಿ ಎಂಬುದು ಬಹಳ ಕಡಿಮೆ. ಏನೋ ಕೆಲವರಲ್ಲಿ ಮಾತ್ರ ಭಕ್ತಿ ಭಾವನೆಗಳಿದ್ದರೂ, ಅವು ಸರಿಯಾದ ವಿಧಾನದಲ್ಲಿ ಇಲ್ಲ. ದೇವರಿದ್ದಾನೆ ಎಂಬ ನಂಬಿಕೆ ಇರುವ ಅನೇಕ ವಿಧಗಳ ಭಕ್ತರಿದ್ದಾರೆ. ಒಬ್ಬೊಬ್ಬರು ಒಂದೊಂದು ವಿಧಾನವನ್ನು ಆಚರಿಸುತ್ತಾ ಅವರಿಗೆ ತಿಳಿದ ವಿಧಾನವೇ ಸರಿಯಾದುದೆಂದುಕೊಳ್ಳುತ್ತಿದ್ದಾರೆ. ಕೆಲವರು ಮಾತ್ರ ಸರಿಯಾದ ಭಕ್ತಿ ಉಂಟಾಗಿ ಜ್ಞಾನವನ್ನು ಆರ್ಜಿಸಿ ಆತ್ಮ ಪರಮಾತ್ಮರನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಕೆಲವರು ದಾರಿಯಲ್ಲಿ ಹೋಗುತ್ತ ದೇವಾಲಯದ ಮುಂದೆ ನಮಸ್ಕರಿಸಿ ಹೋದಷ್ಟು ಮಾತ್ರಕ್ಕೆ ನಮಗಿಂತಲೂ ಹೆಚ್ಚು ಭಕ್ತಿ ಇರುವವರು ಎಲ್ಲೂ ಇಲ್ಲವೆಂದುಕೊಳ್ಳುತ್ತಿದ್ದಾರೆ. ಕೆಲವರು ವರ್ಷಕ್ಕೊಂದು ತೆಂಗಿನಕಾಯಿಯನ್ನು ದೇವಾಲಯದಲ್ಲಿ ಹೊಡೆಸಿ ಕೊಂಡು ಬಂದು ಉಳಿದವರಿಗಿಂತಲೂ ನಾವು ಬಹಳ ದೊಡ್ಡಭಕ್ತರೆಂದು ಅಂದುಕೊಳ್ಳುತ್ತಿದ್ದಾರೆ. ಕೆಲವರು ದೇವಾಲಯದವರೆಗೂ ಸಹ ಹೋಗದೇ ಮನೆಯಲ್ಲಿಯೇ ಯಾವುದೋ ಒಂದು ದೇವತಾ ಫೋಟೋ ಮುಂದೆ ನಮಸ್ಕರಿಸಿ ಭಕ್ತಿ ಇರುವವನೆಂದು ತೃಪ್ತಿ ಪಡುತ್ತಿದ್ದಾರೆ. ಕೆಲವರು ತಿರುಪತಿ ಮೊದಲಾದ ಯಾತ್ರೆಗಳಿಗೆ ಹೋಗಿ ಅಷ್ಟೋಇಷ್ಟೋ ಮುಡುಪು (ಮೀಸಲು) ಹಾಕಿ ಕೋರಿಕೆ ಗಳನ್ನು ಕೋರುವುದೇ ಭಕ್ತಿ ಎಂದುಕೊಂಡಿದ್ದಾರೆ. ಕೆಲವರು ಶಿವಲಿಂಗಗಳಿಗೆ ಅಭಿಷೇಕ ಮಾಡಿಸಿ ಮೃತ್ಯುದೋಷಗಳು ಹೋಗಬೇಕೆಂದು ಕೋರುವುದು ಪದ್ಧತಿ ಎಂದುಕೊಳ್ಳುತ್ತಿದ್ದಾರೆ. ಕೆಲವರೇನೋ ಕಾಣಿಸುತ್ತಿರುವ ಗಿಡಕ್ಕೂ, ಗುಡ್ಡಕ್ಕೂ ಸಹ ಕೈಮುಗಿಯುವವರಾಗಿದ್ದಾರೆ. ಇವರೆಲ್ಲರದು ಭಕ್ತಿಯೇ ಆದರೂ ಅದಕ್ಕೆ ತಕ್ಕ ಅರ್ಥವಿಲ್ಲ. ನಡೆಯುತ್ತಿರುವುದು ದಾರಿಯಾದರೂ ಸೇರುವ ಗಮ್ಯ ಸ್ಮಶಾನವಾಗ ಬಹುದು,ಕಾಡಾಗಿರಬಹುದು, ನೀರಿನ ಕೊಳವಾಗಬಹುದು, ಗ್ರಾಮವಾಗಿರಬಹುದು. ಹಾಗೆ ಮಾಡುವುದು ಭಕ್ತಿಯೇ ಆದರೂ ಅದು

ಯಾವ ವಿಧವಾಗಿಯಾದರೂ ಇರಬಹುದು. ಪರಮಾತ್ಮನನ್ನು ಸೇರಿಸುತ್ತದೆಂಬ ನಂಬಿಕೆ ಇಲ್ಲ. ತಿಳಿಯದೇ ನಡೆದ ದಾರಿ ಕಾಡನ್ನು ಸೇರಿಸಿದಂತೆ ಅರ್ಥರಹಿತವಾದ ಭಕ್ತಿ ಕೋರಿಕೆಗಳಿಂದ ತುಂಬಿರುವುದಾಗಿ ಜನ್ಮಗಳನ್ನು ಉಂಟುಮಾಡುತ್ತದೆ.

ಪರಮಾತ್ಮನನ್ನು ತಿಳಿಸುವ ಉದ್ದೇಶವೇ ಸೃಷ್ಟಿ ಮಾಡಲ್ಪಟ್ಟಿರುವ ದೇವಾಲಯಗಳು ಮುಡುಪು (ಮೀಸಲು) ಗಳೆಂಬ ಲಂಚ ತೋರಿಸಿ ಕೋರಿಕೆ ಗಳನ್ನು ಕೋರುವ ಸ್ಥಳಗಳಾಗಿರುವುದರಿಂದ ವಿಚಾರಿಸ ತಕ್ಕ ವಿಷಯವಾಗಿದೆ. ಕೋರಿಕೆಗಳು ನೆರವೇರದೆ ಹೋದರೆ ದೇವರನ್ನು ದೂಷಿಸುವುದು ನಡೆಯುತ್ತಿದೆ. ಕೋರಿಕೆಗಳನ್ನು ಕೋರಬೇಕೆಂದು ನಾನು ನೆರವೇರಿಸುತ್ತೇನೆಂದು ಯಾವ ಗುಡಿಯಲ್ಲಿನ ದೇವರಾದರೂ ಹೇಳಿದ್ದಾನಾ? **ಆಸೆ ಎಂಬ ಹಗ್ಗದಿಂದ ಕಟ್ಟಿಹಾಕಲ್ಪಟ್ಟು ವಿವಿಧ ಕೋರಿಕೆಗಳನ್ನು ಕೋರುವುದು ಭಕ್ತಿಯಲ್ಲ. ನೂರು ರೂಪಾಯಿಗಳನ್ನು ಖರ್ಚು ಮಾಡಿ ಅಭಿಷೇಕ ಮಾಡಿಸಿ ಲಕ್ಷ ರೂಪಾಯಿಗಳ ಆದಾಯ ಬರಬೇಕೆಂದು ಕೋರುವುದು ಭಕ್ತಿಯಲ್ಲ. ಕರ್ಮದಿಂದ ಸಂಭವಿಸುವ ರೋಗಗಳು ವಾಸಿಯಾದರೆ ಹರಕೆಗಳನ್ನು ಸಲ್ಲಿಸುತ್ತೇನೆಂದು ಕೋರುವುದು ಭಕ್ತಿಯಾಗಲಾರದು. ಆತ್ಮಾವಗಾಹನೆಯನ್ನು ಮಾಡುವ ದೇವಾಲಯಗಳು ಮಾನವರಿಗೂ ದೇವರುಗಳಿಗೂ ಮಧ್ಯ ಕೋರಿಕೆಗಳ ವ್ಯಾಪಾರ ಕೇಂದ್ರಗಳು ಆಗುತ್ತಿರುವುದು ಶೋಚನೀಯವಾಗಿದೆ.**

ಎಂಬತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ ಉತ್ತಮವಾದ ಬುದ್ಧಿಯಿರುವ ಮಾನವ ಜನ್ಮ ಧರಿಸಿ, ಪಾಪ ಪುಣ್ಯಗಳ ವ್ಯತ್ಯಾಸ ತಿಳಿಯದೇ, ನಡೆಯುವ ಕೆಲಸಗಳಿಗೆಲ್ಲ ಕಾರಣವೇನೆಂದು ವಿವರಿಸಿಕೊಳ್ಳದೇ, ತಮ್ಮ ತಿಳುವಳಿಕೆಯೇ ಎಲ್ಲದಕ್ಕೂ ಕಾರಣವೆಂದುಕೊಳ್ಳುವುದು ಅಹಂಕಾರವೇ ಆಗುತ್ತದೆ. ಹುಟ್ಟು ಸಾವುಗಳು ಅದರ ನಂತರ ಸ್ಥಿತಿ ಏನೆಂದು ಯೋಚಿಸದೇ ವ್ಯರ್ಥವಾಗಿ ಕಾಲ ಕಳೆಯುವುದು ಜೀವನಕ್ಕೇ ಅರ್ಥವಿರುವುದಿಲ್ಲ. ಹೆಸರಾಗಲಿ, ರೂಪವಾಗಲಿ ಇಲ್ಲದ ಪರಮಾತ್ಮನನ್ನು ಕಂಡುಕೊಳ್ಳಲು ಒಂದು ಪದ್ಧತಿಯಿಂದ ಕೂಡಿಕೊಂಡಿ ರುವ ಮಾರ್ಗವಿದೆ ಎಂದು ತಿಳಿದುಕೊಳ್ಳದೇ ಹೋಗುವುದು ಅಜ್ಞಾನವೇ

ಆಗುತ್ತದೆ. ಬೆಳಗ್ಗೆ ಎದ್ದಾಗಿನಿಂದಲೂ ಕೆಲಸಗಳಲ್ಲಿ ಮಗ್ನನಾಗಿ ಜೀವನವೆಂದರೆ ಏನೆಂಬ ಭಾವನೆ ಸ್ವಲ್ಪವಾದರೂ ಇಲ್ಲದವರು ಪಶು ಪಕ್ಷಿಗಳು ಜೀವನವನ್ನು ಕಳೆದಂತೆಯೇ ಹೊರತು ಅವುಗಳಿಗಿಂತ ವಿಶೇಷವಿಲ್ಲವೆಂದು ತಿಳಿಯಬೇಕು. ದೇವರಿದ್ದಾನೆಂಬ ನಂಬಿಕೆಯ ಮೇಲೆ ಆಧಾರಬಿದ್ದು ಅದಕ್ಕೆ ಬೇಕಾಗಿರುವ ವಿವರಗಳು ಏನೂ ತಿಳಿಯದೇ ದೇವಾಲಯಗಳಿಗೆ ಹೋಗಿ ಪೂಜೆಗಳು ಮಾಡುವವರನ್ನು ನೋಡಿ ಕೆಲವರು ನಂಬಿಕೆ ಎಂಬುದು ಒಂದು ರೋಗವೆಂದು ವರ್ಣಿಸಿ ಹೇಳುವವರಿದ್ದಾರೆ. ಪ್ರತಿ ಕೆಲಸದಲ್ಲೂ ಒಂದು ವಿಶೇಷವಿದೆಯೆಂದು ತಿಳಿಯದವರು ಕುರುಡರಾಗಿ ಭಕ್ತಿ ಮಾರ್ಗದಲ್ಲಿ ಹೋಗುವವರನ್ನು ನೋಡಿ ಅವರ ಕೆಲಸಗಳಿಗೆ ಆಧಾರವಿಲ್ಲವೆಂದು ನಿರ್ಣಯಿಸಿಕೊಂಡು ದೇವರೇ ಇಲ್ಲವೆನ್ನುವ ವರಿದ್ದಾರೆ. ದೂರದಿಂದ ನೋಡಿದವನು ಹುಣಸೇ ಮರಕ್ಕೂ, ಬನ್ನಿ ಮರಕ್ಕೂ ವ್ಯತ್ಯಾಸ ತಿಳಿಯದಂತೆ ಭಕ್ತಿ ಮಾರ್ಗದಲ್ಲಿ ಅರ್ಥರಹಿತರನ್ನು ನೋಡಿ ಜ್ಞಾನಿಗಳನ್ನು ಯೋಗಿಗಳನ್ನು ಸಹ ಆಸ್ತಿಕ ರೋಗಿಗಳ ಕೆಳಕ್ಕೆ ಲೆಕ್ಕ ಕಟ್ಟುವಂತಹ ನಾಸ್ತಿಕರಿದ್ದಾರೆ. ಆಸ್ತಿಕರು, ನಾಸ್ತಿಕರು ಎಂಬ ಎರಡೂ ಗುಂಪುಗಳಿಗೆ ಯೋಗಿಗಳು ಸಂಬಂಧಿಸಿದವರಲ್ಲವೆಂದು ಬಹಳಜನರಿಗೆ ತಿಳಿದಿಲ್ಲ. ಆಸ್ತಿಕರು ನಂಬಿಕೆ ಇರುವವರು, ನಾಸ್ತಿಕರು ನಂಬಿಕೆ ಇಲ್ಲದವರು. ನಂಬಿಕೆ, ಅಪನಂಬಿಕೆ ಮೇಲೆ ಅಧಾರವಾಗಿರದೆ ಸತ್ಯವನ್ನು ನಿರೂಪಣೆ ಮಾಡಿಕೊಂಡು ಅನುಭವಿಸುವ ವರು ಯೋಗಿಗಳು. ಪುರಾಣಗಳನ್ನು ಅನುಸರಿಸಿ ಹೋಗುವವರು ಆಸ್ತಿಕರಾದರೇ ಅವು ನಿರೂಪಣೆಗೆ ಬಾರದಿರುವವೆಂದು ವಾದಿಸುವವರು ನಾಸ್ತಿಕರು. ಪುರಾಣಗಳೇ ಪ್ರಮಾಣಗಳಲ್ಲವೆಂದು ಶಾಸ್ತ್ರಗಳನ್ನು ತಿಳಿದು ಆಚರಿಸುವವರು ಯೋಗಿಗಳು. ಆಸ್ತಿಕರಿಗೂ, ಯೋಗಿಗಳಿಗೂ ವ್ಯತ್ಯಾಸ ತಿಳಿಯದ ನಾಸ್ತಿಕರು "ಎತ್ತು ಈದಿದೆ ಎಂದರೆ ಗ್ವಾದಲಿಗೆ ಕಟ್ಟಿ ಹಾಕು" ಎನ್ನುವ ಗಾದೆಯಂತೆ ಯೋಗಿಗಳನ್ನು ಸಹ ಆಸ್ತಿಕರ ಕೆಳಕ್ಕೆ ಸೇರಿಸಿಕೊಳ್ಳುತ್ತಿದ್ದಾರೆ. **ಆಸ್ತಿಕರಿಗೆ ನಂಬಿಕೆಯೇ ಪ್ರಧಾನ, ಯೋಗಿಗಳಿಗೆ ನಿರೂಪಣೆಯೇ ಪ್ರಧಾನವೆಂದು ತಿಳಿಯದಿರುವವರು ನಾಸ್ತಿಕರು. ಆಸ್ತಿಕರು ತಿಳಿಯದೇ ಆಚರಿಸುತ್ತಿರುವ ಆಚರಣೆಗಳಿಗೆ ಅರ್ಥ ಕೊಡುವವರು ಯೋಗಿಗಳೆಂದು ತಿಳಿಯದವರು ನಾಸ್ತಿಕರು. ಅಜ್ಞಾನದಿಂದ ಕೋರಿಕೆಗಳನ್ನು**

**ಕೋರುವುದಕ್ಕೋಸ್ಕರ ಮಾಡುವ ವಿಧಾನವೇ ಭಕ್ತಿ ಮಾರ್ಗವೆಂದುಕೊಳ್ಳುವವರನ್ನು ನೋಡಿ ಕೋರಿಕೆಗಳನ್ನು ನೆರವೇರಿಸುವ ಕೇಂದ್ರಗಳೇ ದೇವಾಲಯಗಳೆಂದು ಕೊಳ್ಳುವವರನ್ನು ನೋಡಿ, ಅವರು ಮಾಡುವ ಪೂಜಾ ವಿಧಾನಗಳು ವ್ಯರ್ಥ ಕಾರ್ಯಗಳಾಗಿ ತಿಳಿದ ನಾಸ್ತಿಕರು ದೇವರೆಂಬ ಭಯ ಹೊಂದಿರುವವರು ನಿರ್ಮಿಸಿದವುಗಳೇ ದೇವಾಲಯಗಳೆಂದು, ದೇವಾಲಯಗಳಿಗೆ ಅರ್ಥವಿಲ್ಲವೆಂದು ತಿಳಿಯುತ್ತಿದ್ದಾರೆ.**

ಪ್ರತಿ ಕೆತ್ತನೆಯಲ್ಲಿಯೂ ಆತ್ಮ ಜ್ಞಾನವನ್ನು ಅಳವಡಿಸಿರುವ ನಿರ್ಮಾಣಗಳೇ ದೇವಾಲಯಗಳು. ರೂಪ ಹೆಸರಿಲ್ಲದ ಶೂನ್ಯವಾದ ಶಕ್ತಿಯನ್ನು ಕುರಿತು ವಿವರಿಸುವುದೇ ದೇವಾಲಯ ನಿರ್ಮಾಣಗಳೆಂದು ಹಿಂದೆ ತಿಳಿದು ಕೊಂಡಿದ್ದೇವೆ. ಆಸ್ತಿಕರು, ನಾಸ್ತಿಕರು ಅಲ್ಲದ ಯೋಗಿಗಳು ನಿರ್ಮಿಸಿದ ದೇವಾಲಯಗಳಲ್ಲಿ ನಡೆಯುವ ಪ್ರತಿ ಕೆಲಸಕ್ಕೂ ಯೋಗಿಗಳೇ ಅರ್ಥ ಹೇಳಬೇ ಕಾಗಿದೆ. ಆತ್ಮ ನಿರೂಪಣೆಯ ಮಾರ್ಗವನ್ನು ಸೂಚಿಸುವ ದೇವಾಲಯಗಳನ್ನು ಅರ್ಥಮಾಡಿ ಕೊಳ್ಳಲಾಗದವರು ಆಸ್ತಿಕರಾಗಿದ್ದರೂ ಕುರುಡುತನಕ್ಕಿಂತಲೂ ಮೆಳ್ಳಗಣ್ಣು ಮೇಲೆನ್ನು ವಂತೆ ನಾಸ್ತಿಕರಿಗಿಂತಲೂ ಮೇಲೆಂದು ಹೇಳಬಹುದು. ಆಸ್ತಿಕರಾದವರು ಜ್ಞಾನ ದೃಷ್ಠಿಉಂಟಾಗಿ ನಾವು ತಿಳಿಸುವ ಪ್ರತಿ ಆಚರಣೆಗೂ ಅರ್ಥವನ್ನು ಅವಗಾಹನೆ ಮಾಡಿಕೊಂಡು ಯೋಗ ಮಾರ್ಗವನ್ನಾಚರಿಸುವಿರೆಂದು ತಿಳಿಯುತ್ತಿದ್ದೇವೆ. ನಾಸ್ತಿಕತ್ವವನ್ನು ನಾಶ ಮಾಡಿ ಆಸ್ತಿಕತ್ವವನ್ನು ಸಹ ಬಿಟ್ಟು ನಿರೂಪಣೆಯೇ ಮುಖ್ಯ ಧ್ಯೇಯವೆಂದು ಯೋಗ ಮಾರ್ಗವನ್ನಾಚರಿಸಬೇಕೆಂದು ಈಗ ದೇವಾಲ ಯದ ಪೂಜಾ ವಿಧಾನಗಳಿಗೆ ಅರ್ಥ ತಿಳಿಸುತ್ತಿದ್ದೇವೆ.

# 21. ದೀಪ

ಪೂಜಾವಿಧಾನದಲ್ಲಿ ದೀಪ ಬೆಳಗಿಸುವುದು ಮೊದಲ ಕೆಲಸ. ದೀಪದೊಳಗೆ ಎಣ್ಣೆ ಹಾಕಿ ಎರಡು ಬತ್ತಿಗಳು ಹಾಕಿ ಬೆಳಗಿಸುವ ಆಚಾರ ಇದೆ. ಬೆಳಕಿನ ನಿಮಿತ್ತವೇ ಅಲ್ಲದೆ ಜ್ಞಾನಾರ್ಥದಿಂದ ದೀಪದ ಒಂದು ಸಾರಾಂಶವಿದೆ. ಪ್ರತಿ ಜೀವಿಗೂ ಶರೀರವಿದೆ, ಆ ಶರೀರದಲ್ಲಿ ಕರ್ಮಗಳಿವೆ. ಅದರಲ್ಲಿಯೇ ಆತ್ಮ ಜೀವಾತ್ಮರು ನಿವಾಸವಾಗಿದ್ದಾರೆ. ಜೀವಾತ್ಮ ಶರೀರದಲ್ಲಿ ಜ್ಞಾನದಿಂದ ಯೋಗವನ್ನಾಚರಿಸಿ ಆತ್ಮನಲ್ಲಿ ಬೆರೆತು ಹೋದರೆ ಯೋಗಶಕ್ತಿ ಲಭ್ಯವಾಗುತ್ತದೆ. ಯೋಗ ಶಕ್ತಿಯಿಂದ ಕರ್ಮವೆಲ್ಲ ಸುಟ್ಟುಹೋಗುತ್ತದೆ. ಜ್ಞಾನಾಗ್ನಿ (ಯೋಗ ಶಕ್ತಿ) ಇಲ್ಲದೇ ಕರ್ಮ ಸುಟ್ಟುಹೋಗುವುದಿಲ್ಲ. ಕರ್ಮ ಸುಟ್ಟುಹೋಗದಿದ್ದರೆ ಜನ್ಮಗಳು ಉಂಟಾಗುತ್ತಲೇ ಇರುತ್ತವೆ. ಆದ್ದರಿಂದ ಜನ್ಮ ರಾಹಿತ್ಯವನ್ನು ಬಯಸುವವರು ಅದಕ್ಕೆ ಸಮನಾದ ಅರ್ಥಕೊಡುವಂತೆ ಬಾಹ್ಯಾರ್ಥವಾಗಿ ದೀಪ ಬೆಳಗಿಸುತ್ತಿದ್ದರು.



**(ದೀಪ)**

ದೀಪವನ್ನು(ಹಣತೆಯನ್ನು) ಶರೀರಕ್ಕೆ ಹೋಲಿಸಿ, ಅದರಲ್ಲಿರುವ ಎರಡು ಬತ್ತಿಗಳನ್ನು ಆತ್ಮ, ಜೀವಾತ್ಮರಿಗೆ ಹೋಲಿಸಿ, ಜ್ಞಾನದಿಂದ ಯೋಗವನ್ನು ಆಚರಿಸಿದ ವೇಳೆ ಆತ್ಮ ಜೀವಾತ್ಮರು ಬೆರೆತು ಹೋಗುವವರೆನ್ನುವಂತೆ ಎರಡೂ ಬತ್ತಿಗಳನ್ನು ಬೆರೆಸಿ ಬೆಳಗಿಸುತ್ತಿದ್ದರು. ಎರಡು ಬತ್ತಿಗಳು ಒಂದು ಜ್ಯೋತಿಯಾಗಿ ಬೆಳಗುವುದನ್ನು

ಯೋಗವಾಗಿ ಹೇಳುತ್ತಿದ್ದರು. ಶರೀರವಿರುವಾಗ ತಪ್ಪದೇ ಕರ್ಮವಿರುತ್ತದೆ. ಆದ್ದರಿಂದ ದೀಪ (ಹಣತೆಯನ್ನು) ಇಡುತ್ತಿದ್ದಂತೆಯೇ ಮೊದಲು ಎಣ್ಣೆ ಹಾಕಿ ಇರಿಸಿ ನಂತರ ಬತ್ತಿಗಳನ್ನು ಹಾಕಿ ಬೆಳಗಿಸುತ್ತಾರೆ. ಗುರುವಿನಿಂದಲೇ ಜ್ಞಾನ ಲಭ್ಯವಾಗುತ್ತದೆ, ಆದ್ದರಿಂದ ಪಕ್ಕದ ಅಗ್ನಿಯಿಂದ ಬತ್ತಿಗಳನ್ನು ಬೆಳಗಿಸುತ್ತಾರೆ. ಜ್ಞಾನವೆಂಬ ಅಗ್ನಿಯಿಂದ ಎರಡು ಬತ್ತಿಗಳು (ಜೀವಾತ್ಮ ಆತ್ಮಗಳು) ಏಕವಾಗಿ ಬೆಳಗುತ್ತಿರುವಾಗ ಕರ್ಮ ಎಂಬ ಎಣ್ಣೆ ಖಾಲಿಯಾಗುತ್ತದೆ. ಜ್ಞಾನಾಗ್ನಿಯಿಂದ ಶರೀರದಲ್ಲಿರುವ ಕರ್ಮ ನಾಶವಾಗಿ ಹೋಗುತ್ತದೆಂಬ ಸೂಚನೆಯೇ ಹಣತೆಯಲ್ಲಿನ ಎಣ್ಣೆ ಖಾಲಿಯಾಗುವುದು. ದೀಪದ (ಹಣತೆಯ)ಲ್ಲಿನ ಎಣ್ಣೆ ಖಾಲಿಯಾದ ಕೂಡಲೇ ಎರಡೂ ಬತ್ತಿಗಳು ಆರಿ ಹೋಗುತ್ತವೆ. ಹಾಗೆಯೇ ಶರೀರದೊಳಗಿನ ಕರ್ಮ ಮುಗಿದು ಹೋದಕೂಡಲೇ ಶರೀರದೊಳಗಿನ ಆತ್ಮ ಜೀವಾತ್ಮರು ಇಲ್ಲದಂತಾಗಿ ಪರಮಾತ್ಮನಲ್ಲಿ ಐಕ್ಯವಾಗಿ ಹೋಗುತ್ತಾರೆ. ಶರೀರದೊಳಗಿನ ಆತ್ಮ ಜೀವಾತ್ಮ ಹೋಗಿ ಮೃತದೇಹ ಉಳಿಯುವಂತೆ ಎಣ್ಣೆ ಮುಗಿದು ಹೋಗಿ ಎರಡು ಬತ್ತಿಗಳು ಆರಿಹೋದ ಹಣತೆ ಉಳಿದು ಹೋಗುತ್ತದೆ. ಮೃತ ದೇಹಕ್ಕೆ ಬೆಲೆ ಇಲ್ಲದಂತೆ ಆರಿದ ಹಣತೆಗೂ ಸಹ ಬೆಲೆ ಇರುವುದಿಲ್ಲ. ಪೂರ್ವದಲ್ಲಿ ಮಣ್ಣಿನ ದೀಪ (ಹಣತೆ) ಗಳನ್ನು ಬಿಸಾಡುತ್ತಿದ್ದರು. ಮೃತ ಶರೀರ ನಶಿಸುವುದು ಆದ್ದರಿಂದ ಹೊಡೆದು ಹೋಗುವ ಮಣ್ಣಿನ ದೀಪಗಳನ್ನಿಡುತ್ತಿದ್ದರು, ಪದ್ಧತಿ ಪ್ರಕಾರ ಲೋಹದ ಹಣತೆಗಳನ್ನು ಬಳಸಬಾರದು. ಒಂದು ವೇಳೆ ಲೋಹದ ದೀಪಗಳನ್ನಿಟ್ಟಲ್ಲಿ ಶುಭ್ರ ಮಾಡಿ ಬಳಸಿಕೊಳ್ಳುತ್ತಿದ್ದರು. ಈಗಲೂ ಸಹ ಮಣ್ಣಿನ ಮೂಕಟೆಗಳಲ್ಲಾಗಲೀ, ಅಥವಾ ಸಣ್ಣ ಮಣ್ಣಿನ ದೀಪ (ಹಣತೆ) ಗಳಲ್ಲಾಗಲಿ ದೀಪ ಬೆಳಗಿಸುವ ಸಂಪ್ರದಾಯ ಕೆಲವು ದೇವಾಲಯಗಳಲ್ಲಿ ಇದೆ. ಜೀವಿಯು ಗುರು ಕೊಟ್ಟ ಜ್ಞಾನಾಗ್ನಿಯಿಂದ ಆತ್ಮದೊಂದಿಗೆ ಕೂಡಿ ಬೆಳಗುತ್ತಾ ಎಲ್ಲವನ್ನು ತೊರೆದು ಪರಮಾತ್ಮನಲ್ಲಿ ಸೇರಿಹೋಗುವ ಸೂಚನೆಯೇ ದೀಪಾರಾಧನೆಯ ಅಂತರಾರ್ಥವೆಂದು ತಿಳಿಯಬೇಕು. ಗುಡಿಯಲ್ಲಿ ಎಷ್ಟು ದೀಪಗಳನ್ನು ಇಟ್ಟರೂ ಬತ್ತಿಗಳು ಎಣ್ಣೆ ಇರುತ್ತದೆ ಆದ್ದರಿಂದ ಎಲ್ಲಕ್ಕೂ ಒಂದೇ ಅರ್ಥವಿರುತ್ತದೆ. ದೊಡ್ಡ ಪೂಜೆಗಳು ಮಾಡದಿದ್ದರೂ ವಿಶೇಷಾರ್ಥ ವಿರುವಂತಹ

ದೀಪಾರಾಧನೆಯನ್ನು ಪ್ರತಿಯೊಂದು ಮನೆಯಲ್ಲೂ ಮಾಡಬೇಕೆಂದು ಹಿರಿಯರು ತಿಳಿಸಿದ್ದಾರೆ. ಇಂದಿಗೂ ಕೆಲವರ ಮನೆಗಳಲ್ಲಿ ಬೆಳಿಗ್ಗೆ ಸಾಯಂಕಾಲ ದೀಪರಾಧನೆ ಮಾಡುವುದು ವಾಡಿಕೆಯಲ್ಲಿದೆ. ಆದರೂ ದೀಪಾರಾಧನೆ ಆಚರನೆಯಾಗಿಯೇ ಇದೆ, ಆದರ ಅರ್ಥ ಶೂನ್ಯವಾಗಿ ಹೋಗಿದೆ. ಕೆಲವರು ಒಂದೇ ಬತ್ತಿ ಹಾಕಿ ಬೆಳಗಿಸುತ್ತಿರುತ್ತಾರೆ. ಹಾಗೆ ಬೆಳಗಿಸಬಾರದು. ಹಾಗೆ ಬೆಳಗಿಸುವುದರಿಂದ ಆಚರಣೆಯನ್ನು ಸಹ ತಪ್ಪು ಮಾಡಿದಂತಾಗುತ್ತದೆ. ಈ ಕಾಲದಲ್ಲಿ ಕೆಲವು ದೇವಾಲಯಗಳಲ್ಲಿ ಹಣತೆಗಳಲ್ಲಿ ದೀಪಾರಾಧನೆ ಮಾಡದಂತೆ ಕರೆಂಟ್ ಬಲ್ಬ್ ಬೆಳಗಿಸಿ ನಮಸ್ಕರಿಸುತ್ತಿದ್ದಾರೆ. ಅರ್ಥವಿಲ್ಲದಿದ್ದರೂ ಆಚಾರವಾದರೂ ಇರುವುದು ಒಳ್ಳೆಯದು. ಆದರೆ ಆಚರಣೆಯೂ ಸಹ ಇಲ್ಲದಂತಾದರೆ ಮತ್ತಷ್ಟು ಅಜ್ಞಾನವಾಗುತ್ತದೆ. ಆದ್ದರಿಂದ ಕರೆಂಟ್ ಬಲ್ಬ್‌ಗಳು ಎಷ್ಟು ಬೆಳಗಿಸಿದರೂ, ಅರ್ಥವಿರುವಂತೆ ಮಣ್ಣಿನ ಹಣತೆಗಳಲ್ಲಿ ದೀಪಾರಾಧನೆ ಮಾಡುವುದು ಅರ್ಥದಿಂದ ಕೂಡಿರುವ ಸಂಪ್ರದಾಯವಾಗುತ್ತದೆ.

# 22. ತಾಂಬೂಲ

ಪೂಜಾವಿಧಾನದಲ್ಲಿ ತಾಂಬೂಲವನ್ನು ಇಡುವುದು ಸಹ ರೂಢಿಯಲ್ಲಿದೆ. ತಾಂಬೂಲದಲ್ಲಿ 1) ಎಲೆ, 2) ಅಡಿಕೆ, 3) ಸುಣ್ಣ ಪೂರ್ವ ಕಾಲದಲ್ಲಿ ಇಡುತ್ತಿದ್ದರು. ತಾಂಬೂಲದಲ್ಲಿ ಎಲೆ ವಿಶಾಲವಾದುದು. ಅದಕ್ಕಿಂತಲೂ ಕಡಿಮೆ ಪ್ರಮಾಣದಲ್ಲಿರುವುದು ಅಡಿಕೆ. ಅಡಿಕೆಗಿಂತಲೂ ಪರಿಮಾಣದಲ್ಲಿ ಕಡಿಮೆ ಇರುವುದು ಸುಣ್ಣ. ಈ ಮೂರು ಬೆರೆತರೆ ಕೆಂಪಗೆ ಬದಲಾಗುವ ಸ್ವಭಾವಗಳಿವೆ. ವೀಳ್ಯದೆಲೆಗೆ ಚುರುಕುತನವಾದ ಪ್ರತ್ಯೇಕತೆ ಇದೆ. ಹಾಗೆಯೇ ಅಡಿಕೆಗೂ ಸಹ ಒಗರು ಒಂದು ಪ್ರತ್ಯೇಕತೆ ಇದೆ. ಸುಣ್ಣವೂ ಸಹ ಘಾಟಾಗಿರುತ್ತದೆ. ಇವು ಮೂರು ಮೂರು ವಿಧಗಳಾಗಿ ಪ್ರತ್ಯೇಕತೆ ಹೊಂದಿವೆ. ನಮ್ಮ ಶರೀರದಲ್ಲಿಯೂ ಸಹ ಗುಣಚಕ್ರದಲ್ಲಿ ವಿಶಾಲವಾದುದು ತಾಮಸ. ಅದಕ್ಕಿಂತಲೂ ಪರಿಮಾಣದಲ್ಲಿ

ಸಣ್ಣದು ರಾಜಸ ಭಾಗ. ರಾಜಸಕ್ಕಿಂತಲೂ ಚಿಕ್ಕದು ಸಾತ್ತ್ವಿಕ. ಈಗ ನಾವು ಗುಣಚಕ್ರದಲ್ಲಿ ವಿಶಾಲವಾದ ತಾಮಸ ಭಾಗವಾಗಿ ತಾಂಬೂಲದಲ್ಲಿ ದೊಡ್ಡದಾದ ವೀಳ್ಯದೆಲೆಯನ್ನು ಹೋಲಿಸಿಕೊಳ್ಳಬಹುದು. ಹಾಗೆಯೇ ರಾಜಸವನ್ನು ಅಡಿಕೆಯಾಗಿಯೂ, ಸಾತ್ತ್ವಿಕವನ್ನು ಸುಣ್ಣವಾಗಿಯೂ ಹಿರಿಯರು ಲೆಕ್ಕಿಸಿದ್ದಾರೆ. ಒಳಗಿನಿಂದ ಗುಣಚಕ್ರದಲ್ಲಿ ಮೂರನೆಯದು ತಾಮಸ, ಎರಡನೆಯದು ರಾಜಸ, ಒಂದನೆಯದು ಸಾತ್ತ್ವಿಕ. ಆದ್ದರಿಂದ ಮೂರು ಎಲೆಗಳು, ಎರಡು ಅಡಿಕೆ, ಒಂದು ಸುಣ್ಣದ ಉಂಡೆ ಇರಿಸುತ್ತಿದ್ದರು. ತಾಂಬೂಲದೊಳಗಿನ ಮೂರು ವಸ್ತುಗಳಿಗೂ ಪ್ರತ್ಯೇಕವಾದ ರುಚಿಗಳಿರುವಂತೆ ಗುಣಚಕ್ರದಲ್ಲಿರುವ ಮೂರು ಗುಣಭಾಗಗಳಿಗೂ ಪ್ರತ್ಯೇಕವಾದ ಆಚರಣೆಗಳು ಇವೆ. ತಾಂಬೂಲದೊಳಗಿನ ಮೂರು ವಸ್ತುಗಳಿಂದ ಕೆಂಪುತನ ಏರ್ಪಟ್ಟಂತೆ ಗುಣಚಕ್ರದೊಳಗಿನ ಮೂರು ಗುಣಗಳಿಂದ ಕರ್ಮ ಎಂಬ ಕೆಂಪುತನವು ಏರ್ಪಟ್ಟಿದೆ. ಆದ್ದರಿಂದ ಜೀವಾತ್ಮ ನಾಗಿರುವ ನಾನು ಕರ್ಮಕ್ಕೆ ಕಾರಣವಾದ ಮೂರು ಗುಣಗಳನ್ನು ನಿನ್ನ ಮುಂದೆಯೇ ಬಿಟ್ಟು ಬಿಡುತ್ತಿದ್ದೇನೆ. ಗುಣಗಳಿಲ್ಲದ ನನ್ನನ್ನು ನಿನ್ನೊಳಗೆ ಐಕ್ಯ ಮಾಡಿಕೊಳ್ಳಬೇಕೆಂದು ಕೋರುವ ಬಾಹ್ಯಾರ್ಥವೇ ತಾಂಬೂಲ ಇಡುವುದೆಂದು ಗ್ರಹಿಸಬೇಕು. ಈ ಕಾಲದಲ್ಲಿ ಪೂಜಾ ಸಮಯದಲ್ಲಿ ತಾಂಬೂಲ ವಿಟ್ಟರು ಎಲೆಗಳು, ಅಡಿಕೆ ಮಾತ್ರ ಇಡುತ್ತಿದ್ದಾರೆ. ಆದರೆ ಸುಣ್ಣವನ್ನು ಇಡುತ್ತಿಲ್ಲ. ಎರಡು ಗುಣಗಳು ಹೋದರೂ ಮೂರನೆಯದು ಇರಬೇಕೆನ್ನುವಂತೆ ಮೂರನೆಯದಾದ ಸುಣ್ಣವನ್ನು ಇಡದೇ ಇರುವುದು ವಿಚಿತ್ರವಾಗಿದೆ. ಸುಣ್ಣವಿಲ್ಲದ ತಾಂಬೂಲ ದೈವ ಸನ್ನಿಧಿಯಲ್ಲಿ ಅರ್ಥವಿಲ್ಲದಂತಾಗುತ್ತದೆ.

ತಾಂಬೂಲದೊಂದಿಗೆ ವಿಧವಿಧವಾದ ತಿನ್ನುವ ತಿನಸುಗಳನ್ನು ನೈವೇದ್ಯ ವಾಗಿ ಇಡುವುದೂ ಸಹ ನಡೆಯುತ್ತಿದೆ. ಪಾಯಸ, ಹಾಲು, ಬಾಳೆಹಣ್ಣು, ಸಕ್ಕರೆ, ಮೊಸರನ್ನ, ಲಾಡು ಮೊದಲಾದವುಗಳನ್ನು ನೈವೇದ್ಯಗಳಾಗಿ ಸಮರ್ಪಿ ಸುವುದನ್ನು ಮಾಡುತ್ತಿದ್ದಾರೆ, ಇವೆಲ್ಲವೂ ತಿನ್ನುವಂತಹ ತಿನಿಸುಗಳೇ. ಯಾವ ಪದಾರ್ಥಗಳನ್ನು ತಿಂದರೂ ಆ ಪದಾರ್ಥದ ಒಂದು ಬಣ್ಣ ಬಾಯಿಯಲ್ಲಿ




**(ತಾಂಬೂಲ)**

ಏರ್ಪಡುವುದಿಲ್ಲ, ಎಲ್ಲಾ ಪದಾರ್ಥಗಳಿಗಿಂತಲೂ ಪ್ರತ್ಯೇಕವಾಗಿರುವ ತಾಂಬೂಲ ತಿಂದರೆ ಬಾಯಿ ಕೆಂಪಾಗುತ್ತದೆ. ಎಲ್ಲಾ ಪದಾರ್ಥಗಳ ಬಣ್ಣ, ವಾಸನೆಗಳನ್ನು ತಾಂಬೂಲ ಮುಚ್ಚಿ ಹಾಕುತ್ತಿದೆ. ಹಾಗೆಯೇ ಆಹಾರಗಳಾದ ತಿನ್ನುವ ಪದಾರ್ಥಗಳಂತೆ ನಮ್ಮ ಶರೀರದಲ್ಲಿ ಅನೇಕ ವಿಧವಾದ ವಿಷಯಗಳಿವೆ. ನಾನಾ ವಿಧವಾದ ವಿಷಯಗಳು ನನ್ನಲ್ಲಿ ಇದ್ದವುಗಳನ್ನು ನಿನಗೇ ಸಮರ್ಪಿಸುತ್ತಿದ್ದೇನೆಂಬ ಸೂಚನೆಯೇ ಎಲ್ಲ ವಿಧವಾದ ಪದಾರ್ಥಗಳನ್ನು ನೈವೇದ್ಯಗಳಾಗಿ ಇಡುವುದು. ಶರೀರದಲ್ಲಿನ ಎಲ್ಲ ವಿಷಯಗಳು ಮೂರು ಗುಣಭಾಗಗಳೊಳಗಿನವೇ ಎಂದು ತೋರಿಸುವ ಸಲುವಾಗಿಯೇ ಎಲ್ಲಾ ಪದಾರ್ಥಗಳನ್ನು ಮೀರಿಸುವ ಕೆಂಪಾಗುವ ತಾಂಬೂಲವನ್ನು ಇಟ್ಟಿದ್ದೇವೆ. ನೈವೇದ್ಯವಾಗಿ ತಿನ್ನುವ ತಿನಸುಗಳು ಯಾವನ್ನಾದರೂ ಇಡಬಹುದು. ಕೆಲವರು ಮಾಂಸವನ್ನೂ ಸಹ ನೈವೇದ್ಯವಾಗಿಡು ವಂತಹ ಪೂಜೆಗಳು ಇವೆ. ಶಾಖಾಹಾರ ನೈವೇದ್ಯವಾದರೂ, ಮಾಂಸಾಹಾರ ನೈವೇದ್ಯವಾದರೂ ತಾಂಬೂಲ ಇಡುವುದನ್ನು ಎಲ್ಲರೂ ಮಾಡುತ್ತಾರೆ. ಇದರಿಂದ ಪ್ರತಿ ವಿಷಯವು ಮೂರು ಗುಣಗಳಿಂದ ಕೂಡಿವೆ ಎಂದು ತಿಳಿದು ಬರುತ್ತಿದೆ.

ಈ ಕಾಲದಲ್ಲಿಯೂ ಸಹ ನೈವೇದ್ಯಗಳನ್ನು ಇಡುವವರು ಎಲ್ಲಾ ಕಡೆಯಲ್ಲೂ ಇದ್ದಾರೆ. ಆದರೆ ತಾಂಬೂಲದಲ್ಲಿ ಸುಣ್ಣ ಇಡುವವರು ಇಲ್ಲ. ಒಂದು ತಿರುಪತಿ ದೇವಸ್ಥಾನದಲ್ಲಿ ಮಾತ್ರ ತಾಂಬೂಲದಲ್ಲಿ ಮಾತ್ರ ಸುಣ್ಣ ಇಡುವ ಸಾಂಪ್ರದಾಯ ವಿರುವಂತೆ ಕೇಳಿಬರುತ್ತಿದೆ. ಹಾಗೆಯೇ ಮಧುರೆಯ ಬಳಿ ಇರುವ ಬೃಂದಾವನ ದಲ್ಲಿಯೂ ಸಹ ಸುಣ್ಣ ಇಡುವ ಸಂಪ್ರದಾಯವಿದೆ ಎಂದು ಕೇಳಿದ್ದೇವೆ.

# 23. ಹೂವಿನ ಮಾಲೆ

ಪೂರ್ವಕಾಲದಲ್ಲಿ ಜ್ಞಾನದೃಷ್ಟಿ ಇರುವ ಪ್ರಜೆಗಳು ಅವರ ಆರಾಧನೆಯಲ್ಲಿ ಹೂವಿನ ಮಾಲೆಯನ್ನು ದೇವರಿಗೆ ಸಮರ್ಪಿಸುತ್ತಿದ್ದರು. ಹಾಗೆಯೇ ದೈವ ಸಮಾನರಾದ ಗುರುಗಳಿಗೂ ಹೂಮಾಲೆಯನ್ನು ಅರ್ಪಿಸುತ್ತಿದ್ದರು. ಈಗಿನ ಕಾಲದಲ್ಲಿ ರಾಜಕೀಯ ನಾಯಕರಿಗೆ ಹೂವಿನ ಮಾಲೆಗಳನ್ನು ಹಾಕುವುದು ನಡೆಯುತ್ತಿದೆ. ಸಾವಿರ ವರ್ಷಗಳ ಹಿಂದೆ ಗುಡಿಯಲ್ಲಿನ ದೇವರಿಗೆ, ಪಾಠಶಾಲೆಯಲ್ಲಿನ ಗುರುವಿಗೆ ಹೊರತು ಇತರರಿಗೆ ಹೂಮಾಲೆ ಹಾಕುತ್ತಿರಲಿಲ್ಲ. ಹೂಮಾಲೆ ಸಿಗದ ಸಮಯದಲ್ಲಿ ಸ್ವಲ್ಪ ಬಿಡಿ ಹೂವಿನಿಂದಲಾದರೂ ದೇವರನ್ನು ಪೂಜಿಸುತ್ತಿದ್ದರು. ಹೂವಿನಿಂದ ಹುಟ್ಟಿರುವುದೇ ಪೂಜೆ ಎನ್ನುತ್ತಿದ್ದರು. ಆದ್ದರಿಂದ ಪೂಜ್ಯಭಾವವಿರುವ ಗುರುಗಳ ಬಳಿ, ದೇವಾಲಯಗಳಲ್ಲಿನ ದೇವರ ಬಳಿ ಮಾತ್ರ ಹೂಗಳನ್ನು ಉಪಯೋಗಿಸುತ್ತಿದ್ದರು. ಆಕಾರ ಸ್ವರೂಪವಿರುವ ಪ್ರತಿಮೆಗಳಿಗೇ ಹೂಮಾಲೆಯನ್ನು ಉಪಯೋಗಿಸುತ್ತಿದ್ದರು, ಲಿಂಗಾಕಾರವಿರುವ ಈಶ್ವರಾಲಯಗಳಲ್ಲಿ ಲಿಂಗದ ಬಳಿ ಹೂಗಳನ್ನು ಉಪಯೋಗಿಸುತ್ತಿರಲಿಲ್ಲ. ಲಿಂಗಕ್ಕೆ ಹೂಮಾಲೆ ಹಾಕದಂತಿರುವುದು, ಆಕಾರವಿರುವ ಪ್ರತಿಮೆಗೆ ಹೂಮಾಲೆ ಹಾಕುವುದರಲ್ಲಿ ಅರ್ಥವೇನೆಂದು ಕೆಲವರಿಗೆ ಪ್ರಶ್ನೆ ಬರಬಹುದು. ಅದಕ್ಕೆ ಸಮಾಧಾನ ಆಕಾರವಿರುವ ಶರೀರದಲ್ಲಿ ಆತ್ಮನೇ ದೇವರೆಂದಿದ್ದೇವೆ ಅಲ್ಲವೆ! ಆ ದೇವರು ಶರೀರ ಮಧ್ಯದಲ್ಲಿ ವ್ಯಾಪಿಸಿಕೊಂಡಿರುವ ಬ್ರಹ್ಮನಾಡಿಯಲ್ಲಿ ನೆಲೆಸಿದ್ದು

ಶರೀರವೆಲ್ಲ ಚೈತನ್ಯ ರೂಪದಿಂದ ವ್ಯಾಪಿಸಿಕೊಂಡಿದ್ದಾನೆ. ಶರೀರದ ಮಧ್ಯದಲ್ಲಿ ಶಿರಸ್ಸಿನಿಂದ ಕೆಳಗಿನವರೆಗೂ ವ್ಯಾಪಿಸಿಕೊಂಡಿರುವ ಬ್ರಹ್ಮನಾಡಿಯಲ್ಲಿ ಆತ್ಮವಿದೆ. ಅದೂ ಒಟ್ಟಿಗೆ ಏಳು ನಾಡೀ ಕೇಂದ್ರಗಳ ಮೇಲೆ ವ್ಯಾಪಿಸಿಕೊಂಡಿದೆ. ಹೂಮಾಲೆಯನ್ನು ದೇವರಿಗೆ ಸಮರ್ಪಿಸುತ್ತಿದ್ದೇವೆ ಎಂಬ ಭಾವನೆಯಿಂದ ಆ ಮಾಲೆ ಏಳು ಕೇಂದ್ರಗಳವರೆಗೂ ಇರುವಂತೆ ತಲೆಯ ಮೇಲಿನಿಂದ ಕೆಳಗಿನವರೆಗೂ ವ್ಯಾಪಿಸುವಂತೆ ಹೂಮಾಲೆಯನ್ನು ಅಲಂಕರಿಸುತ್ತಿದ್ದರು. ಸಾಂಪ್ರದಾಯಾನುಸಾರವಾಗಿ ತಲೆಯ ಮೇಲಿನಿಂದ ಮಾಲೆಯನ್ನು ಧರಿಸುವುದು ಈಗಲೂ ತಿರುಪತಿ ದೇವಸ್ಥಾನದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಪ್ರತಿಮೆಯ ಬಳಿ ನೋಡಬಹುದು. ವಾಸ್ತವವಾಗಿ ಎಲ್ಲಿಯಾದರೂ ಯಾವ ದೇವರಿಗಾದರೂ ಹಾಗೆಯೇ ಮಾಡಬೇಕಾಗಿರುವುದರಿಂದ ಹಾಗೆಯೇ ಮಾಡದೇ ಹೂಮಾಲೆಯನ್ನು ಭುಜದ ಮೇಲಿನಿಂದ ಅಂದರೆ ಕಂಠದ ಬಳಿಯಿಂದಲೇ ಧರಿಸುವಂತೆ ಮಾಡುತ್ತಿದ್ದಾರೆ. ಕಂಠದ ಬಳಿಯಿಂದ ಮಾಲೆ ಇರುವುದರಿಂದ ಬ್ರಹ್ಮನಾಡಿಯ ಐದು ಕೇಂದ್ರಗಳಿಗೇ ಮಾಲೆ ಹಾಕಿದಂತಾಗುತ್ತದೆ. ಉಳಿದ ಎರಡು ಕೇಂದ್ರಗಳಿಗೆ ಬಿಟ್ಟು ಹಾಕಿದಂತಾಗುತ್ತದೆ. ಕೆಲವರೇನೋ ಸಣ್ಣ ಮಾಲೆಯನ್ನು ಧರಿಸುವುದರಿಂದ ಮೇಲಿನ ಕಂಠಸ್ಥಾನದಿಂದ ಹೃದಯ ಸ್ಥಾನದವರೆಗೂ ವ್ಯಾಪಿಸುವುದರಿಂದ ಕೇವಲ ಎರಡು ಸ್ಥಾನಗಳಿಗೇ ಸರಿ ಹೋಗುತ್ತಿದೆ. ಕೆಳಗೆ ಮೂರು ಕೇಂದ್ರಗಳನ್ನು ಬಿಟ್ಟು ಹಾಕಿದಂತಾಗುತ್ತಿದೆ. ಹಾಗೆ ಹಾಕುವುದು ಸಂಪ್ರದಾಯ ಅಲ್ಲವೇ ಅಲ್ಲ. ಆದ್ದರಿಂದ ಅನುಕೂಲ ಇದ್ದರೆ ಉದ್ದನೆಯ ಮಾಲೆಯಿಂದ ಏಳು ಕೇಂದ್ರಗಳಿಗೂ ಮಾಲೆ ಹಾಕಬೇಕು. ಇಲ್ಲದಿದ್ದರೆ ಕೆಲವು ಹೂವುಗಳನ್ನಾಗಲೀ ಅಥವಾ ಒಂದು ಹೂವನ್ನಾಗಲಿ ದೇವರ ಶಿರೋಭಾಗದಲ್ಲಿ ಇಟ್ಟು ಆರಾಧಿಸುವುದು ಒಳ್ಳೆಯದು. ಮೇಲೆ ಒಂದು ಕೇಂದ್ರದ ಮೇಲೆ ಇಡುವುದರಿಂದ ಆತ್ಮ ಎಲ್ಲಕ್ಕೂ ಇಟ್ಟಂತಾಗುತ್ತದೆ. ಹಾಗಲ್ಲದೆ ಮೇಲೆ ಬಿಟ್ಟು ಕೆಳಗೆ ಐದು ಕೇಂದ್ರಗಳಿಗೆ ಹೂಮಾಲೆ ಹಾಕಿದರೂ ಪ್ರಯೋಜನವಿರುವುದಿಲ್ಲ.

ಆಲಯದಲ್ಲಿನ ದೇವರ ನಂತರ ಪೂಜ್ಯ ಸ್ಥಾನದದಲ್ಲಿರುವವನು ಗುರು. ಗುರು ಶರೀರದಲ್ಲಿ ಆತ್ಮ ಸ್ವರೂಪನಾಗಿ ಏಳು ಕೇಂದ್ರ್ರಗಳನ್ನು ವ್ಯಾಪಿಸಿ ಇದ್ದಾನೆಂಬ ಭಾವನೆಯಿಂದಲೇ ಹೂಮಾಲೆಯನ್ನು ಹಾಕುತ್ತಿದ್ದರು. ಭಕ್ತಿ ಭಾವನೆಯಿಂದ, ಆರಾಧ್ಯಭಾವನೆಯಿಂದ ಗುರುವಿನ ಶಿರಸ್ಸಿನ ಮೇಲಿನಿಂದ ಸಪ್ತ ಸ್ಥಾನಗಳವರೆಗೂ ಹಾಕಿರುವ ಮಾಲೆಯನ್ನು ನಂತರ ಗುರುಗಳು ತೆಗೆದು ಇಡುತ್ತಿದ್ದನು ಅಥವಾ ತಲೆಯ ಮೇಲಿನಿಂದ ಭುಜದ ಮೇಲಕ್ಕೆ ಹಾಕಿಕೊಳ್ಳುತ್ತಿದ್ದನು. ಗುಡಿಯೊಳಗಿನ ಪ್ರತಿಮೆ ಚಲಿಸುವುದಿಲ್ಲವಾದ್ದರಿಂದ ಆ ಹೂಮಾಲೆಯನ್ನು ಹಾಗೆಯೇ ತಲೆಯ ಮೇಲೆ ಇಡುತ್ತಿದ್ದರು. ಗುರು ಚಲಿಸುವವನಾದ್ದರಿಂದ ಮಾಲೆ ಕೆಳಗೆ ಬಿದ್ದು ಹೋಗುವ ಅವಕಾಶವಿರುತ್ತದೆ. ಹಾಗೆ ಬಿದ್ದು ಹೋಗದಂತೆ ನಂತರ ಭುಜದ ಮೇಲಕ್ಕೆ ಸರಸಿಕೊಳ್ಳುತ್ತಿದ್ದರು. ಇಲ್ಲದಿದ್ದರೆ ಪೂರ್ತಿಯಾಗಿ ತೆಗೆದು ಪಕ್ಕಕ್ಕೆ ಇಡುತ್ತಿದ್ದರು. ಯಾವುದು ಏನಾದರೂ ಸಪ್ತ ಸ್ಥಾನಗಳಿಗೆ ಮಾಲೆಯನ್ನು ಧರಿಸುವಂತೆ ಮಾಡುವುದೇ ಮುಖ್ಯ ಉದ್ದೇಶ. ಏಳು ಕೇಂದ್ರ್ರಗಳಲ್ಲಿಯೂ ಇದ್ದು ಶರೀರವನ್ನು ಬೊಂಬೆಯಂತೆ ಆಡಿಸುವ ದೈವಕ್ಕೆ ಹೂಮಾಲೆ ಹಾಕುತ್ತಿದ್ದೇನೆಂದು ತಿಳಿದು ಹಾಕುತ್ತಿದ್ದರು. ಗುರುವಿನ ಶರೀರದಲ್ಲಿಯೂ ಸಹ ಅದೇ ಆತ್ಮ ಇದೆಯೆಂದು ತಿಳಿದು ಗುರುವಿಗೂ ಸಹ ಹಾಕುತ್ತಿದ್ದರು. ಉಳಿದ ಎಲ್ಲಾ ಶರೀರಗಳಲ್ಲಿಯೂ ಸಹ ಆತ್ಮವಿದ್ದರೂ ಎಲ್ಲರಿಗೂ ಮಾಲೆ ಹಾಕದೇ ಗುರುವಿಗೆ, ದೇವರಿಗೆ ಇಬ್ಬರಿಗೆ ಮಾತ್ರವೇ ಹಾಕಿ ಅವರು ಮಾತ್ರವೇ ಪೂಜ್ಯರೆಂದು ತಿಳಿಸಿದ್ದಾರೆ. ಈಗಿನ ಕಾಲದಲ್ಲಿ ಪೂಜ್ಯಭಾವನೆ ಇಲ್ಲದಿದ್ದರೂ, ಗೌರವಕ್ಕಾಗಿಯೋ, ಅಥವಾ ಮನ್ನಣೆ ಪಡೆಯಲೋ, ನೆನಪಿಗಾಗಿಯೋ, ಇತರರಿಗೂ ಸಹ ಮಾಲೆ ಹಾಕುವುದು ನಡೆಯುತ್ತಿದೆ. ಹಾಗೆ ಮಾಡುವುದರಿಂದ ಈಗಿನ ಪ್ರಜೆಗಳಿಗೆ ಯಾರು ಪೂಜ್ಯರು ಎಂಬ ವಿಷಯ ತಿಳಿಯದೇ ಹೋಗಿದೆ. ಆದ್ದರಿಂದ ಇವರು ಪೂಜ್ಯರೆಂದು ತಿಳಿಯುವಂತೆ ಆಲಯದೊಳಗಿನ ದೇವರಿಗೆ, ಜ್ಞಾನ ತಿಳಿಸುವ ಗುರುವಿಗೆ ಹೂಮಾಲೆ ಹಾಕುತ್ತೇವೆ.

ಶಿವಲಿಂಗಕ್ಕೆ ಮಾಲೆ ಹಾಕಬಾರದು ಎಂದಿದ್ದೇವೆ ಅಲ್ಲವೇ! ಅದು ಪೂಜ್ಯವಲ್ಲವೇ ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಲಿಂಗವು

ಮಾನವಾಕೃತಿಯಲ್ಲ. ಮಾನವಾಕೃತಿಯಲ್ಲಿ ಆತ್ಮ ದೇವರಾಗಿರುತ್ತಾನೆಂಬ ಭಾವನೆಯಿಂದ ಆಕೃತಿ ಇರುವ ಪ್ರತಿಮೆಗೆ ಮಾಲೆಯನ್ನು ಮೇಲಿನಿಂದ ಹಾಕುವುದು ನಡೆದಿದೆ. ಲಿಂಗದಲ್ಲಿ ಆತ್ಮವು ಇಲ್ಲ, ಜೀವಾತ್ಮವೂ ಇಲ್ಲ. ಲಿಂಗವು ಪರಮಾತ್ಮನ ಸ್ವರೂಪ ಎಲ್ಲ ಕಡೆಯಲ್ಲೂ ವ್ಯಾಪಿಸಿಕೊಂಡಿರುವ ಅದಕ್ಕೆ ಪರಿಮಿತಿ ಸ್ಥಾನ ಕಲ್ಪಿಸಿ ಹೂಮಾಲೆ ಹಾಕಲಾರೆವು. ಇತರೆ ದೇವಾಲಯಗಳಲ್ಲಿನ ಮಾದರಿಯಂತೆ ಅಭಿಷೇಕ, ಆರಾಧನೆ ಎಲ್ಲದರಲ್ಲಿಯೂ ಬಹಳ ವ್ಯತ್ಯಾಸ ವಿರುತ್ತದೆ. ಮೋಕ್ಷದ ಚಿಹ್ನೆಯು ಪುರುಷೋತ್ತಮನ ಭಾವನೆಯಾದ ಲಿಂಗದ ಮುಂದೆ ಆರಾಧನೆ ಇರದು. ಆದರೆ ಅರ್ಥಮಾಡಿಕೊಳ್ಳುವುದೇ ಇರುತ್ತದೆ, ಲಿಂಗದ ಪ್ರತ್ಯೇಕತೆಯೇ ಅದು. ಸೃಷ್ಠಿ ರಹಸ್ಯವನ್ನು ತಿಳಿಸುವ ಲಿಂಗವನ್ನು ನೋಡಿ ಅದರ ದೊಡ್ಡತನವನ್ನು ತಿಳಿದುಕೊಳ್ಳಬೇಕಾಗಿರುವುದೇ ಹೊರತು ಆರಾಧಿಸುವಂತಹುದ್ದಲ್ಲ. ಪೂರ್ವದಲ್ಲಿ ಜ್ಞಾನ ತಿಳಿದಿರುವ ಹಿರಿಯರು ಹೇಗೆ ನಡೆದಿದ್ದರೆ ಹಾಗೆ ಅರ್ಥ ತಿಳಿದು ನಡೆಯಬೇಕಾಗಿರುವುದು ನಮ್ಮ ಕರ್ತವ್ಯ. ಹಾಗಲ್ಲದೇ ನಮ್ಮ ಇಷ್ಟ ಬಂದಂತೆ ಮಾಡುತ್ತ ಹೋಗದಂತೆ ಪ್ರತಿಯೊಂದಕ್ಕೂ ಒಂದು ಹದ್ದು ಆಚಾರವಿರುತ್ತದೆಂದು ದೇವಾಲಯಗಳಲ್ಲಿ ತಿಳಿಸುವ ಆಚಾರಗಳು ಯಾವುವೋ ಅವುಗಳ ಅರ್ಥಗಳೇನೆಂಬುದನ್ನು ಗ್ರಹಿಸಿ ಅವುಗಳ ಪ್ರಕಾರ ದೇವರಿಗೆ ಸಮರ್ಪಿಸುವ ಹೂಮಾಲೆಯನ್ನು ಪೂರ್ತಿ ಅರ್ಥದಿಂದ ಸಪ್ತ ಸ್ಥಾನಗಳಿಗೆ ಸಮರ್ಪಿಸೋಣ.

# 24. ಅಭಿಷೇಕ

ದೇವಾಲಯಗಳಲ್ಲಿ ಇರುವ ದೇವರುಗಳಿಗೆ ಅಭಿಷೇಕ ಮಾಡುತ್ತಿರುತ್ತಾರೆ. ಪೂಜಾ ವಿಧಾನದಲ್ಲಿ ಅಭಿಷೇಕವೂ ಸಹ ಒಂದು ಭಾಗವಾಗಿದೆ. ಪೂರ್ವದಲ್ಲಿ ಜ್ಞಾನಿಗಳು ದೇವಾಲಯಗಳಿಗೆ ದೇವಾಲಯಗಳಲ್ಲಿನ ಕೆಲಸಗಳಿಗೆ ಭಾವಯುಕ್ತ ವಾದ ಆಚಾರವಾಗಿ ಅರ್ಥಗಳನ್ನು ಅಳವಡಿಸಿ ಇಟ್ಟಿದ್ದಾರೆ. ಆದರೆ ಅವುಗಳ

ವಿವರವು ಕಾಲಗರ್ಭದಲ್ಲಿ ಮರೆಯಾಗಿ ಹೋಗುವುದರಿಂದ ಕೆಲವು ಆಚಾರಗಳು ಉಳಿದುಕೊಂಡಿದ್ದರೂ ಅರ್ಥಗಳಿಲ್ಲದಂತೆಹೋಗಿವೆ. ಆದ್ದರಿಂದ ಕೆಲವರು ಆಚಾರಗಳನ್ನು ಸಕ್ರಮವಾಗಿ ಆಚರಿಸದೇ ಅವರ ಸ್ವಬುದ್ಧಿಗೆ ತೋಚಿದಂತೆ ಕೆಲವು ಕೆಲಸಗಳನ್ನು ಕರಗತ ಮಾಡಿಕೊಂಡಿದ್ದಾರೆ. ಅಂತಹ ಕೆಲಸಗಳಲ್ಲಿ ಅಭಿಷೇಕ ಕಾರ್ಯವೂ ಸಹ ಒಂದಾಗಿದೆ. ಅಭಿಷೇಕವೆಂದರೆ ಪ್ರತಿಮೆಗೆ ಸ್ನಾನ ಮಾಡಿಸುವುದು ಎಂದು ಅರ್ಥ. ಪೂರ್ವದಲ್ಲಿ ಗರ್ಭಗುಡಿಯಲ್ಲಿನ ಪ್ರತಿಮೆಯನ್ನು ಕೇವಲ ಮೂರು ದ್ರವಗಳಿಂದಲೇ ತೊಳೆಯುತ್ತಿದ್ದರು. ಅವು ಯಾವುವೆಂದರೆ 1) ಜೇನು, 2) ಹಾಲು, 3) ನೀರು ಇರುತ್ತಿದ್ದವು. ಅಭಿಷೇಕವೆಂಬ ಪ್ರತಿಮೆಯ ಸ್ನಾನವು ಕೇವಲ ಆಕಾರವಿರುವ ಪ್ರತಿಮೆಗಳಿಗೇ ಮಾಡುತ್ತಿದ್ದರು. ಆಕಾರವಿಲ್ಲದ ಶಿವಲಿಂಗಕ್ಕೆ ಮಾಡುತ್ತಿರಲಿಲ್ಲ. ಈ ಕಾಲದಲ್ಲಿ ಶಿವಲಿಂಗಕ್ಕೂ ಸಹ ಅಭಿಷೇಕ ಕಾರ್ಯವನ್ನು ಮಾಡುತ್ತಿದ್ದಾರೆ. ಲಿಂಗಾಭಿಷೇಕವೇ ಮುಖ್ಯವೆಂದು ತಿಳಿಯುವವರು ಬಹಳ ಜನ ಇದ್ದಾರೆ, ಇದು ಪೂರ್ತಿಸಂಪ್ರದಾಯಕ್ಕೆ ವಿರುದ್ಧ. ಲಿಂಗವನ್ನು ಅಭಿಷೇಕ ಪ್ರಿಯನೆಂದು ವರ್ಣಿಸಿರುವುದು ಮತ್ತಷ್ಟು ವಿಡ್ಡೂರ. ಈ ನಮ್ಮ ಮಾತುಗಳು ಕೆಲವರಿಗೆ ಮೆಚ್ಚುಗೆಯಾಗದೇ ಹೋಗಬಹುದು. ಮೆಚ್ಚುಗೆಯಾಗಲೀ ಆಗದಿರಲಿ ಸತ್ಯವನ್ನೇ ತಿಳಿದುಕೊಳ್ಳಬೇಕೆಂದುಕೊಳ್ಳುವವರಿಗೆ ತಿಳಿಯಪಡಿಸುವು ದೇನೆಂದರೆ!

ನಾವು ಮೊದಲೇ ಹೇಳಿಕೊಂಡಿದ್ದೇವೆ. ಲಿಂಗವನ್ನು ದೇವತೆಗಳ ಜೊತೆಗೆ ಸೇರಿಸಬಾರದೆಂದು, ಹಾಗೆಯೇ ಲಿಂಗವಿರುವ ಗುಡಿಯನ್ನು ಗರ್ಭಗುಡಿ ಎನ್ನಬಾರದೆಂದೂ ಸಹ ಹೇಳಿದ್ದೇವೆ. ಲಿಂಗವನ್ನು ಸಾಕ್ಷಾತ್ ನಿರಾಕಾರನಾದ ಪರಮಾತ್ಮನಂತೆ ಭಾವಿಸಬೇಕೆಂದೂ ಸಹ ತಿಳಿಸಿದ್ದೇವೆ. ಲಿಂಗಕ್ಕೆ ಪ್ರಭಾವಳಿಯನ್ನು ಇಡಬಾರದೆಂದೂ ಸಹ ಹೇಳಿದ್ದೇವೆ. ಇದಕ್ಕೆಲ್ಲ ಕಾರಣ ಯಾವುದನ್ನು ಪುರುಷೋತ್ತಮನೆನ್ನುತ್ತಿದ್ದೇವೋ, ಯಾವುದನ್ನು ಜೀವಾತ್ಮ ಆತ್ಮಗಳಿಗಿಂತ ಪರವಾಗಿರುವ ಪರಮಾತ್ಮ ಎನ್ನುತ್ತಿದ್ದೇವೋ, ಅದನ್ನೇ ಪ್ರತಿಬಿಂಬವಾಗಿ, ಲಿಂಗರೂಪವಾಗಿ ದೇವಾಲಯಗಳಲ್ಲಿ ತೋರಿಸಿದ್ದೇವೆ. ಆದ್ದರಿಂದ ಲಿಂಗವನ್ನು

ಎಲ್ಲಕ್ಕಿಂತಲೂ ಅತೀತವಾದುದೆಂದು ಭಾವಿಸಬೇಕಾಗಿದೆ. ಲಿಂಗವು ರೂಪವಿಲ್ಲದ ದೇವರೆಂದು, ಎಲ್ಲ ಪ್ರತಿಮೆಗಳನ್ನೂ ರೂಪವಿರುವ ದೇವರುಗಳಾಗಿ ಭಾವಿಸಬೇಕಾಗಿದೆ. ಲಿಂಗವನ್ನು ಪರಮಾತ್ಮನೆಂದು ಭಾವಿಸಿದರೆ ರೂಪವಿರುವ ದೇವರನ್ನು ಭಗವಂತನಂತೆ ಭಾವಿಸಬೇಕು. ಲಿಂಗವು ಮಾಯಾತೀತವಾದುದು. ಆದ್ದರಿಂದ ಅದಕ್ಕೆ ಪ್ರತಿಮೆಗಳಿಗಿರುವ ಆಚಾರಗಳಿರುವುದಿಲ್ಲ. ರೂಪವಿರುವ ಪ್ರತಿಮೆಗಳು ಭಗವಂತನ ಚಿಹ್ನೆಗಳಾದ್ದರಿಂದ ಅವುಗಳಿಗೆ ಪ್ರತ್ಯೇಕವಾದ ಆಚಾರಗಳನ್ನು ಹಿರಿಯರು ನಿರ್ಣಯಿಸಿದ್ದಾರೆ. ಭಗವಂತನು ಭಗದಿಂದ ಹುಟ್ಟಿ ಬಂದು ನಮ್ಮ ಹಾಗೆಯೇ ಭೂಮಿಯ ಮೇಲೆ ಸಂಚರಿಸುತ್ತಾನೆ. ಆದ್ದರಿಂದ ಭಗವಂತನಿಗೆ ನಮ್ಮಂತೆ ಗುಣಗಳೂ ಸಹ ಇರುತ್ತವೆ. ಗುಣಗಳೇ ಅಲ್ಲದೆ ಸರ್ವಸಾಧಾರಣವಾಗಿ ಆತನು ಭೂಮಿಯ ಮೇಲೆ ನಡೆಯಬೇಕಾಗಿರುತ್ತದೆ. ಒಂದು ಜ್ಞಾನವನ್ನು ಬೋಧಿಸುವುದರಲ್ಲಿ ಹೊರತು ಎಲ್ಲದರಲ್ಲಿಯೂ ಸಾಧಾರಣ ವ್ಯಕ್ತಿಯಾಗಿದ್ದ ಅವನನ್ನು ಭಗವಂತನೆಂದು ಗುರುತಿಸುವುದು ಅಸಾಧ್ಯ. ಆದ್ದರಿಂದ ಎಷ್ಟೋ ಸಲ ಪರಮಾತ್ಮನೇ ಭಗವಂತನಾಗಿ ಬಂದಾಗ ಆತನನ್ನು ಗುರುತಿಸದೆಹೋಗಿದ್ದಾರೆ. ಸರ್ವ ಸಾಧಾರಣವಾಗಿರುವ ಭಗವಂತನು ಗುಣಗಳೊಡನೆಯೇ ಸಂಚರಿಸುತ್ತಿರುತ್ತಾನೆ. ಆತನಿಗೂ ಸಹ ಸಾಧಾರಣ ಮನುಷ್ಯನಿಗಿರುವಂತೆ ಸಾತ್ತ್ವಿಕ, ರಾಜಸ, ತಾಮಸಗಳೆಂಬ ಗುಣಗಳಿರುತ್ತವೆ. ಆ ಮೂರು ಗುಣಗಳು ತಲೆಯಲ್ಲಿಯೇ ಇರುತ್ತವೆ. ತಲೆಯಲ್ಲಿ ನಿಲಯವಾಗಿರುವ ಗುಣಗಳಿಂದ ಎಲ್ಲರಂತೆ ಭಗವಂತನು ಆಚರಿಸುತ್ತಿದ್ದರೂ ಆತನು ನಮ್ಮಂತೆಯೇ ಕರ್ಮ ಬದ್ಧನಲ್ಲ. ತಾವರೆಯ ಎಲೆಯ ಮೇಲೆ ನೀರಿದ್ದರೂ ತಾವರೆಯ ಎಲೆಗೆ ತೇವ ಅಂಟದಂತೆ ಗುಣಗಳಲ್ಲಿ ಭಗವಂತನಿದ್ದರೂ ಭಗವಂತನಿಗೆ ಗುಣಗಳ ಫಲಿತವಾದ ಕರ್ಮ ಅಂಟುವುದಿಲ್ಲ. ನಿತ್ಯವೂ ಗುಣಗಳಲ್ಲೇ ಇದ್ದರೂ ಅವುಗಳ ಕಲ್ಮಶವಾದ ಕರ್ಮ ಆತನಿಗೆ ಅಂಟಿಕೊಂಡಿಲ್ಲ ಎಂಬ ಅರ್ಥ ತಿಳಿಯುವಂತೆ ಮೊದಲು ಜೇನಿನಿಂದ, ನಂತರ ಹಾಲಿನಿಂದ, ಆ ನಂತರ ನೀರಿನಿಂದ ಪ್ರತಿಮೆಯನ್ನು ಅಭಿಷೇಕ ಮಾಡಿ ಮೆತ್ತಗಿರುವ ನೂಲಿನ ಬಟ್ಟೆಯಿಂದ ತೇವ ಇಲ್ಲದಂತೆ ಒರೆಸುತ್ತಾರೆ.

ತಾಮಸ ಗುಣ ಬಹಳ ನೀಚವಾದುದು. ಅದರಲ್ಲಿ ಸಿಲುಕಿಕೊಂಡವರು ಅನೇಕ ಅಜ್ಞಾನ ಒಡಕು ತೊಡಕುಗಳಿಗೆ ಒಳಗಾಗುತ್ತಾರೆ. ಜೇನು ಸಿಹಿಯಾಗಿಯೂ ಮತ್ತು ಜಿಗಿಟಿನಂತೆ ಇರುತ್ತದೆ. ಜೇನಿನ ಒಂದು ಸಿಹಿಗೋಸ್ಕರ ಅದರ ಮೇಲೆ ಕುಳಿತ ಕೀಟಗಳು ಜೇನಿನ ಜಿಗಟಿಗೆ ಸಿಲುಕಿಕೊಂಡು ಅದರಲ್ಲಿಯೇ ಮುಳುಗಿ ಕೊನೆಗೆ ಮರಣಿಸುತ್ತವೆ. ಜೇನು ಯಾವ ವಿಧವಾಗಿರುತ್ತದೆಯೋ ಹಾಗೆಯೆ ತಾಮಸ ಗುಣಭಾಗದಲ್ಲಿನ ಆರು ಗುಣಗಳು ಪ್ರಪಂಚದಲ್ಲಿ ಜೀವಾತ್ಮನಿಗೆ ಮಾಧುರ್ಯವನ್ನು ತೋರಿಸುವವುಗಳಂತೆ ಇದ್ದು ಆ ಗುಣದಲ್ಲಿ ಸಿಲುಕಿಕೊಂಡ ಜೀವಿಯನ್ನು ದೇವರ ಕಡೆಗೆ ಹೋಗದಂತೆ ಮಾಡುತ್ತಾ ಅಧೋಗತಿ ಜನ್ಮಗಳು ಉಂಟುಮಾಡುತ್ತಿವೆ. ಆದ್ದರಿಂದ ತಾಮಸ ಗುಣವನ್ನು ಜೇನಿನೊಂದಿಗೆ ಸಮಾನವಾಗಿ ಹೋಲಿಸಿ ಆ ಗುಣ ಭಗವಂತನ ತಲೆಯಲ್ಲಿ ಇದ್ದರೂ ಅದರ ಮಾಲಿನ್ಯ ತಲೆಯಿಂದ ಇಳಿಜಾರಿ ಹೋಗಿದೆ ಎಂದು ಮೊದಲು ಜೇನನ್ನು ತಲೆಯ ಮೇಲಿಂದ ಕೆಳಕ್ಕೆ ಹೋಗುವಂತೆ ಪ್ರತಿಮೆಯ ಮೇಲೆ ಸುರಿಯುತ್ತಾರೆ. ನಂತರ ಜೇನಿಗಿಂತಲೂ ಬಣ್ಣ ರುಚಿಯಲ್ಲಿ ಎಷ್ಟೋ ಭಿನ್ನವಾಗಿರುವ ಹಾಲನ್ನು ರಾಜಸ ಗುಣಕ್ಕೆ ಹೋಲಿಸಿ ಹಾಲನ್ನು ಸಹ ತಲೆಯ ಮೇಲಿನಿಂದ ಕೆಳಗೆ ಜಾರಿ ಹೋಗುವಂತೆ ಸುರಿಯುತ್ತಿದ್ದಾರೆ. ಜೇನು, ಹಾಲು ಮುಗಿದು ಹೋದನಂತರ ಸಾತ್ತ್ವಿಕ ಗುಣಕ್ಕೆ ಸಮಾನವಾಗಿರುವ ನೀರನ್ನು ಹೋಲಿಸಿ ನೀರನ್ನು ಸಹ ಅದೇ ವಿಧವಾಗಿ ಸುರಿದು ತೇವ ಇಲ್ಲದಂತೆ ಒರೆಸಿ ಭಗವಂತನಿಗೆ ಮೂರು ಗುಣಗಳಿದ್ದರೂ ಅವುಗಳಿಂದಲೇ ಪರಿಶುದ್ಧನಾದವನು ಎಂಬ ಅರ್ಥವನ್ನು ತಿಳಿಸಿದ್ದಾರೆ. ಪೂರ್ವದಲ್ಲಿ ಹೀಗೆ ಅರ್ಥದಿಂದ ಕೂಡಿಕೊಂಡಿರುವ ಅಭಿಷೇಕವಿದ್ದರೆ ಈದಿನ ಅಭಿಷೇಕ ಅರ್ಥಹೀನವಾಗಿಹೋಗಿದೆ. ಅಭಿಷೇಕದಲ್ಲಿ ಜೇನು, ಹಾಲು, ನೀರನ್ನೆ ಅಲ್ಲದೆ ತುಪ್ಪವನ್ನು ಮೊಸರನ್ನು ಸಹ ಉಪಯೋಗಿಸುತ್ತಿದ್ದಾರೆ. ಹಾಗೆ ತುಪ್ಪ, ಮೊಸರು ಬಳಸುವುದು ಆಚಾರ ವಿರುದ್ಧವಾದುದು. ಅಭಿಷೇಕವನ್ನು ಆಕಾರ ಇರುವ ಗುಣಗಳಿರುವ ಭಗವಂತನು ಗುಣಾತೀತನೆಂಬ ಉದ್ದೇಶದಿಂದ ಮಾಡುವುದು. ಆದರೆ ಜನ್ಮಿಸದೆ ಇರುವ ಪರಮಾತ್ಮನು ನಿರಾಕಾರನಾಗಿ ಗುಣದಿಂದ ಸಂಬಂಧವೇ ಇಲ್ಲದಿರುವಾಗ, ಅಂತಹವನನ್ನು

ಉದ್ದೇಶಿಸಿ ಲಿಂಗವನ್ನಿಟ್ಟಾಗ, ಆ ಲಿಂಗಕ್ಕೆ ಅಭಿಷೇಕ ಮಾಡುವುದರಲ್ಲಿ ಲಿಂಗಕ್ಕೆ ಅರ್ಥವಿರುವುದಿಲ್ಲ. ಆದ್ದರಿಂದ ಲಿಂಗಕ್ಕೆ ಅಭಿಷೇಕ ಸರಿಯಾದದ್ದು ಅಲ್ಲವೆಂದು, ಆಕಾರ ಪ್ರತಿಮೆಗಳಿಗೂ ಸಹ ಜೇನು, ಹಾಲು ನೀರಿನಿಂದ ಮಾತ್ರ ಅಭಿಷೇಕ ಮಾಡಬೇಕೆಂದು, ಆಗ ಮಾತ್ರವೇ ಇಂದೂ ಧರ್ಮ ಆಚರಣೆಯಾಗುವುದೆಂದು ಹಾಗಲ್ಲದೆ. ಬೇರೆ ವಿಧವಾಗಿ ಮಾಡುವುದು ಅಧರ್ಮಾಚರಣೆ ಆಗುತ್ತದೆಂದು ಧರ್ಮ ಪ್ರತಿಷ್ಠಾಪನೆ ಮಾಡುವ ಭಗವಂತನಿಗೆ ಅಧರ್ಮಗಳು ಸರಿ ಬೀಳುವುದಿಲ್ಲವೆಂದು ತಿಳಿಯಬೇಕು. ಈಗಿನಿಂದಲಾದರೂ ಅಭಿಷೇಕ ಅರ್ಥ ಹೀನವಾಗದಂತೆ ಪ್ರತಿಮೆಗಳಿಗೇ ಮಾಡಬೇಕೆಂದು ತಿಳಿಸುತ್ತಿದ್ದೇವೆ.

# 25. ತೆಂಗಿನ ಕಾಯಿ

ದೇವಾಲಯದಲ್ಲಾಗಲೀ ಮನೆಯಲ್ಲಾಗಲೀ ಎಷ್ಟು ತಿಳುವಳಿಕೆಯಿಲ್ಲದವರಾದರೂ ತೆಂಗಿನಕಾಯಿ ಇಲ್ಲದೇ ಪೂಜೆ ಮಾಡುವುದಿಲ್ಲ. ತೆಂಗಿನಕಾಯಿ ಹೊಡೆದರೇನೆ ಪೂಜೆ ಮಾಡಿದಂತೆ ಎಂಬ ಭಾವನೆ ಬಹುಜನರಲ್ಲಿ ಇದೆ. ತೆಂಗಿನಕಾಯಿಯನ್ನು ಪ್ರತಿಮೆಯ ಮುಂದೆ ಏಕೆ ಹೊಡೆಯುತ್ತಾರೆ? ಎಂದು ಕೆಲವರನ್ನು ಕೇಳಿದರೆ, ತೆಂಗಿನಕಾಯಿಯನ್ನು ದೇವರಿಗೆ ಅರ್ಪಿಸಿ ಅದನ್ನು ನಾವು ಪ್ರಸಾದವಾಗಿ ತೆಗೆದುಕೊಳ್ಳುವುದಕ್ಕಾಗಿ ಮುಖ್ಯವಾದುದೆಂದು ತಿಳಿಸಿದ್ದಾರೆ. ತೆಂಗಿನಕಾಯಿ ಏತಕ್ಕಾಗಿ ಮುಖ್ಯವಾದುದು? ಇತರೆ ಕಾಯಿಗಳನ್ನು ಏತಕ್ಕಾಗಿ ಹೊಡೆಸಬಾರದು? ಎಂದು ಕೇಳಿದರೆ ಅದಕ್ಕೆ ಸರಿಯಾದ ಸಮಾಧಾನ ಹೇಳದೆ ದೊಡ್ಡವರು ಮಾಡಿದಂತೆ ಮಾಡಬೇಕೆ ಹೊರತು ವಿವರಣೆ ಕೇಳಬಾರದು ಎಂದು ಹೇಳುತ್ತಿದ್ದಾರೆ. ಇನ್ನು ಕೆಲವರನ್ನು ತೆಂಗಿನಕಾಯಿಗೆ ಸಿಪ್ಪೆಯನ್ನೆಲ್ಲಾ ತೆಗೆದ ಮೇಲೆ ಜುಟ್ಟು ಸ್ವಲ್ಪ ಬಿಡುತ್ತಿದ್ದೇವೆ ಅ ಸ್ವಲ್ಪ ಏತಕ್ಕಾಗಿ ಬಿಡಬೇಕು? ಎಂದು ಪ್ರಶ್ನಿಸಿದರೆ ಪೂರ್ವದಿಂದ ಬರುತ್ತಿರುವ ಪದ್ಧತಿಯನ್ನೇ ಮಾಡಬೇಕು, ಆದರೆ ಅದನ್ನು ವಿಮರ್ಶೆ ಮಾಡಬಾರದೆಂದಿದ್ದಾರೆ. ಅವರಿಗೆ ತಿಳಿಯದ ಹಾಗೆ

ಹೇಳಿದ್ದಾರೆ, ಆದರೆ ತೆಂಗಿನಕಾಯಿಯಲ್ಲಿ ಎಷ್ಟೋ ಅರ್ಥವಿದೆ. ಆ ಅರ್ಥವನ್ನು ತಿಳಿದುಕೊಳ್ಳಲಾರದೆ ಅದನ್ನು ಪೂಜಾ ಸಾಧನೆಯಾಗಿ ಇಟ್ಟುಕೊಂಡು ದೇವರೊಂದಿಗೆ ವ್ಯಾಪಾರ ಮಾಡುತ್ತಿದ್ದೇವೆ. ತೆಂಗಿನಕಾಯಿಯ ಒಂದು ಸಾರಾಂಶ ತಿಳಿದುಕೊಂಡರೆ ಭಕ್ತಿ ಎಷ್ಟೋ ಚೆನ್ನಾಗಿರುತ್ತಿತ್ತು. ಅದರ ಸಾರಾಂಶ ತಿಳಿಯದೇ ಕೆಲವರು ಭಕ್ತರು ಒಬ್ಬರು ನಾಲ್ಕು, ಒಬ್ಬರು ಎರಡು, ಹಣ ಇದ್ದವರು ಇನ್ನೂ ಹೆಚ್ಚಾಗಿ ಹೊಡೆಯುತ್ತಿದ್ದಾರೆ. ಹೆಚ್ಚಾಗಿ ತೆಂಗಿನಕಾಯಿಗಳನ್ನು ಹೊಡೆದರೆ ಭಕ್ತಿ, ಇಲ್ಲದೆ ಹೋದರೆ ಭಕ್ತಿ ಅಲ್ಲವಾ? ಏನು ಇಲ್ಲದ ಬಡವ ತೆಂಗಿನಕಾಯಿ ಹೊಡೆಯಲಾಗದೇ ಹೋದಲ್ಲಿ ಅವನದು ಭಕ್ತಿ ಅಲ್ಲವೆನ್ನುತ್ತೇವಾ? ದೇವರು ಒಪ್ಪಿಕೊಳ್ಳುವುದಿಲ್ಲ ಎನ್ನುತ್ತೇವಾ? ಎಲ್ಲವುಗಳಿಗಿಂತ ಮುಖ್ಯವಾದುದು ಮನಸ್ಸು. ಏನು ಇಲ್ಲದೆ ಹೋದರೂ ಮನಸ್ಸಿದ್ದರೆ ಅದಕ್ಕಿಂತಲೂ ನನಗೆ ಪ್ರಿಯರು ಇಲ್ಲವೆಂದು ದೇವರು ಗೀತೆಯಲ್ಲಿ ಹೇಳಿದ್ದಾನೆ. ಆದರೆ ತೆಂಗಿನಕಾಯಿ ಪೂಜಾ ವಿಧಾನದಲ್ಲಿ ಏತಕ್ಕಾಗಿ ಸ್ಥಳ ಮಾಡಿಕೊಂಡಿದೆ, ಅದರ ಪ್ರತ್ಯೇಕತೆ ಏನೆಂದರೆ? ತೆಂಗಿನಕಾಯಿ ಸಹ ಪರಮಾತ್ಮನನ್ನು ತಿಳಿದುಕೊಳ್ಳುವುದಕ್ಕೆ ಚಿಹ್ನೆಯಾಗಿ ಉಪಯೋಗಪಡುತ್ತಿದೆ. ಆದ್ದರಿಂದ ಪೂರ್ವದಲ್ಲಿ ಹಿರಿಯರು ತೆಂಗಿನಕಾಯಿ ಯನ್ನು ದೇವಾಲಯಗಳಲ್ಲಿ ಉಪಯೋಗಿಸಿದ್ದಾರೆ. ತೆಂಗಿನಕಾಯಿ ಯಿಂದ ಅಜ್ಞಾನಿಗಳು ಜ್ಞಾನಿಗಳಾಗಿ ಬದಲಾಗುವರೆಂದು ಹಿರಿಯರು ಈ ಕೆಲಸವನ್ನು ಮಾಡಿದ್ದಾರೆ. ಆದರೆ ಕಾಲಕ್ರಮೇಣ ಅದರ ಅರ್ಥಹೋಗಿದೆ. ಅದರ ಅರ್ಥತಿಳಿಸುವವರು ಹೋಗಿದ್ದಾರೆ. ಈ ಕಾಲದಲ್ಲಿ ತೆಂಗಿನಕಾಯಿ ಮಾನವರಿಗೂ, ದೇವರಿಗೂ ಮಧ್ಯ ವ್ಯಾಪಾರ ವಸ್ತುವಾಗಿ ಬದಲಾಗಿ ಹೋಗಿದೆ.

ತೆಂಗಿನಕಾಯಿ ಸುತ್ತಲೂ ಇರುವ ನಾರನ್ನೆಲ್ಲ ತೆಗೆದರೆ ಕಾಯಿ ಮೂರು ಭಾಗಗಳಾಗಿ ಕಾಣಿಸುತ್ತದೆ. ಕಾಯಿ ಮೇಲೆ ಇರುವ ಮೂರು ಗೆರೆಗಳು ಕಾಯಿಯನ್ನು ಮೂರು ಭಾಗಗಳಾಗಿ ಕಾಣಿಸುವಂತೆ ಮಾಡುತ್ತಿವೆ. ಪ್ರತಿ ಭಾಗದ ಮೇಲೂ ಕಣ್ಣಿನ ಮಾದರಿಯಲ್ಲಿ ಒಂದು ತಗ್ಗು ಇದೆ. ಮೂರು ಭಾಗಗಳಿಗೂ ಮೂರು ಕಣ್ಣುಗಳಿವೆ, ಆದ್ದರಿಂದ ತೆಂಗಿನಕಾಯಿಗೆ ಮುಕ್ಕಣ್ಣನೆಂದು ಹೆಸರು



**(ತೆಂಗಿನಕಾಯಿ)**

ಬಂದಿದೆ. ತೆಂಗಿನಕಾಯಿಗಿರುವ ಮೂರು ಭಾಗಗಳಿಗೂ ಮೇಲೆ ಜುಟ್ಟಿನಂತೆ ಸ್ವಲ್ಪ ನಾರು ಉಳಿಸುತ್ತಿದ್ದೇವೆ. ತುದಿಯಲ್ಲಿರುವ ಈ ಜುಟ್ಟಿಗೆ ಪ್ರತ್ಯೇಕತೆ ಇದೆ, ತೆಂಗಿನಕಾಯಿ ಜುಟ್ಟನ್ನು ಮೇಲಕ್ಕೆ ಮಾಡಿ ಅದರ ಮೇಲಿರುವ ದೊಡ್ಡ ಹೊಟ್ಟೆಯನ್ನು ನಮಗೆ ಎದುರುಗಡೆ ಹಿಡಿದುಕೊಂಡು ನೋಡಿದರೆ ದೊಡ್ಡಭಾಗಕ್ಕೆ ಎರಡು ಕಡೆಗಳಲ್ಲೂ ಎರಡೂ ಭಾಗಗಳು ಇರುತ್ತವೆ! ಆ ಭಾಗಗಳ ಮೇಲೆ ಕಣ್ಣುಗಳು (ಕುಣಿಗಳು) ಇವೆ! ಬಲಭಾಗದಲ್ಲಿರುವ ಭಾಗವನ್ನು ಸೂರ್ಯನಾಡಿ ಎಂದು ಆ ಭಾಗದ ಮೇಲಿರುವ ಕಣ್ಣನ್ನು ಆ ನಾಡೀ ಕೇಂದ್ರವೆಂದೂ ಎಡಗಡೆ ಇರುವ ಭಾಗವನ್ನು ಚಂದ್ರನಾಡಿ ಎಂದೂ, ಆ ಭಾಗದ ಮೇಲೆ ಇರುವ ಕಣ್ಣನ್ನು ಆ ನಾಡಿ ಕೇಂದ್ರವೆಂದೂ, ಎರಡು ಭಾಗಗಳಿಗೂ ಮಧ್ಯೆ ದೊಡ್ಡಭಾಗವಾಗಿರುವುದನ್ನು ಬ್ರಹ್ಮನಾಡಿ ಎಂದೂ, ಆ ಭಾಗದ ಮೇಲೆ ಇರುವ

ಕಣ್ಣನ್ನು ಆ ನಾಡೀಕೇಂದ್ರವೆಂದು ತಿಳಿದುಕೊಳ್ಳಬೇಕು. ಸೂರ್ಯ, ಚಂದ್ರ, ಬ್ರಹ್ಮನಾಡಿಗಳು ಏಕವಾದಾಗಲೇ ಜ್ಞಾನ ಉದ್ಭವಿಸುತ್ತದೆ. ಅ ನಂತರ ಜೀವಾತ್ಮನು ದೇವರಂತೆ ಬದಲಾಗಿಹೋಗಿ ಹುಟ್ಟು ಸಾವುಗಳು ಹೊಂದದೇ ಹೋಗುವನು. ಈ ಮೂರು ನಾಡಿಗಳನ್ನು ಒಂದು ಮಾಡಿದವನು ಯೋಗಿ ಎಂದು ತಿಳಿಸುವುದಕ್ಕೆ ತೆಂಗಿನಕಾಯಿಯ ಮೇಲೆ ಸಹ ಮೂರು ಭಾಗಗಳಿಂದ ಏಕವಾಗಿ ಜುಟ್ಟು ಇಡಲಾಗಿದೆ. ಮೂರು ನಾಡಿಗಳು ಏಕವಾದವನು ಜನ್ಮಗಳಿಲ್ಲದೆ ಆತ್ಮನಲ್ಲಿ ಐಕ್ಯವಾಗುತ್ತಾನೆ. ಆದ್ದರಿಂದ ಮೂರು ಭಾಗಗಳಿಂದ ಏಕವಾಗಿ ಬದಲಾದ ಜುಟ್ಟಿನ ತುದಿಯ ಭಾಗ ಆಕಾಶವನ್ನು ತೋರಿಸುತ್ತಿದೆ. ಜೀವಿಯು ಯಾವ ಆಕಾರವು ಇಲ್ಲದಿರುವುದರಲ್ಲಿ ಐಕ್ಯವಾಗುವನು. ಆದ್ದರಿಂದ ಜುಟ್ಟಿನ ತುದಿಯೂ ಸಹ ಯಾವ ಆಕಾರವು ಇಲ್ಲದ ಆಕಾಶವನ್ನು ತೋರಿಸುತ್ತಿದೆ. ಮೂರು ನಾಡಿಗಳನ್ನು ಏಕಮಾಡಿದವನು ಜ್ಞಾನದ ತುದಿಯ ಭಾಗಕ್ಕೆ ಸೇರಿರುತ್ತಾನೆ. ಆದ್ದರಿಂದ ತೆಂಗಿನಕಾಯಿ ಜುಟ್ಟಿಗೂ ಸಹ "ಜ್ಞಾನಶಿಖ" ಎಂಬ ಹೆಸರು ಬಂದಿದೆ. ಜ್ಞಾನ ಶಿಖ ಎಂದರೆ ಜ್ಞಾನಕ್ಕೆ ತುದಿಭಾಗ ಎಂದು ಅರ್ಥ. ವಿವೇಕವಂತರಾದ ಬ್ರಾಹ್ಮಣರು ಅವರ ತಲೆಗಳ ಮೇಲೆ ಜುಟ್ಟನ್ನು ಏತಕ್ಕಾಗಿ ಬಿಡುತ್ತಿದ್ದಾರೆಂದರೆ! ಜ್ಞಾನಶಕ್ತಿ ನೆಲೆಸಿರುವ ಸ್ಥಳ ಶರೀರದಲ್ಲಿ ತಲೆಯೊಂದೆ, ಆದ್ದರಿಂದ ಜ್ಞಾನಶಕ್ತಿ ಇರುವ ಬ್ರಾಹ್ಮಣರು ಬಾಹ್ಯಾರ್ಥವಾಗಿ ತಲೆಯಲ್ಲಿರುವ ಕೂದಲುಗಳನ್ನೆಲ್ಲಾ ತೆಗೆದು ಶಿಖವನ್ನು ಮಾತ್ರ ಇಡುತ್ತಿದ್ದರು. ತಲೆಯೇ ಜೀವಿಗೆ ಸ್ಥಾನ, ಆದ್ದರಿಂದಲೇ ಯೋಚನೆಗಳು ಉದ್ಭವಿಸುತ್ತಿವೆ. ಬ್ರಹ್ಮಜ್ಞಾನಿಗಳು ಯೋಚನೆಗಳನ್ನು ಜಯಿಸಿದ್ದಾರೆ. ಆದ್ದರಿಂದ ಅವರು ನಮ್ಮಲ್ಲಿ ಯಾವ ಯೋಚನೆಗಳು ಇಲ್ಲವೆಂಬ ಭಾವನೆಯಿಂದ ಬಾಹ್ಯಾರ್ಥವಾಗಿ ತಲೆಯ ಮೇಲಿನ ಕೂದಲುಗಳನ್ನು ತೆಗೆದುಹಾಕುತ್ತಿದ್ದಾರೆ. ಹಾಗೆಯೇ ತೆಂಗಿನಕಾಯಿಗೂ ಸಹ ಸುತ್ತಲೂ ಇರುವ ಸಿಪ್ಪೆ ಸುಲಿಯಲಾಗುತ್ತಿದೆ. ತಲೆಯಲ್ಲಿಯೇ ಬ್ರಹ್ಮನಾಡಿಯ ಏಳನೇ ಕೇಂದ್ರವು ಇದೆ! ಅದರ ಮೂಲಕವೇ ಜೀವಿಯು ಬ್ರಹ್ಮನಲ್ಲಿ ಐಕ್ಯವಾಗಬೇಕು. ಬ್ರಹ್ಮನಾಡಿ ಶರೀರದ ಮಧ್ಯಭಾಗದಲ್ಲಿದೆ. ತಲೆಯ ಮೇಲೂ ಸಹ ಅದರ ಸ್ಥಾನ ಮಧ್ಯದಲ್ಲಿಯೇ ಇದೆ. ಆದ್ದರಿಂದ ಜ್ಞಾನಶಕ್ತಿ ಇರುವವರು ತಮ್ಮ ತಲೆಗಳ ಮೇಲೆ ಮಧ್ಯಭಾಗದಲ್ಲಿ ಜ್ಞಾನಶಿಖ

ಎಂಬ ಹೆಸರಿನಿಂದ ಕೆಲವು ಕೂದಲುಗಳನ್ನು ಬಿಡುತ್ತಿದ್ದಾರೆ. ಹಾಗೆಯೇ ತೆಂಗಿನಕಾಯಿಗೂ ಸಹ ಮೇಲೆ ಜುಟ್ಟು ಬಿಡುತ್ತಿದ್ದಾರೆ. ಪೂರ್ವದಲ್ಲಿ ಈ ವಿಧವಾಗಿ ಮಾಡುತ್ತಿದ್ದರು. ಕಾಲಕ್ರಮದಲ್ಲಿ ಜುಟ್ಟನ್ನು ಎಲ್ಲಿ ಬಿಡಬೇಕೆನ್ನುವುದನ್ನು ತಿಳಿಯದೇ, ಯಾರು ಬಿಟ್ಟು ಕೊಳ್ಳಬೇಕೆಂಬುದನ್ನು ತಿಳಿಯದೇ, ಏತಕ್ಕಾಗಿ ಬಿಟ್ಟುಕೊಳ್ಳ ಬೇಕೆಂಬುದನ್ನು ತಿಳಿಯದೇ ಬಹಳ ಜನರು ಸಂದಿಗ್ಧದಲ್ಲಿದ್ದಾರೆ. ಬ್ರಹ್ಮಜ್ಞಾನಿಯಾದ ಈಶ್ವರನು ತನ್ನ ತಲೆಯ ಮೇಲಿದ್ದ ಕೂದಲುಗಳನ್ನು ಇಷ್ಟಾನುಸಾರವಾಗಿ ಬಿಡದೆ ಜ್ಞಾನಶಿಖವಾಗಿ ಮುಡಿಹಾಕಿದ್ದಾನೆ. ಆ ಮುಡಿ ಈಶ್ವರನ ತಲೆಯ ಮಧ್ಯ ಭಾಗದಲ್ಲಿದೆ. ಹಾಗೆಯೇ ಎಷ್ಟೋ ಜನ ಮಹರ್ಷಿಗಳು ಸಹ ಜ್ಞಾನಶಿಖವನ್ನು ತಲೆಯ ಮೇಲೆ ಮಧ್ಯೆ ಭಾಗದಲ್ಲಿ ಇರಿಸಿದ್ದಾರೆ. ಹೀಗೆ ಎಷ್ಟೋ ಮಂದಿ ಜ್ಞಾನಿಗಳು ತಮ್ಮ ಸೂರ್ಯ, ಚಂದ್ರ ನಾಡಿಗಳನ್ನು ಬ್ರಹ್ಮನಾಡಿಯಲ್ಲಿ ಐಕ್ಯಮಾಡಿ ಅದರ ಬಾಹ್ಯಾರ್ಥವನ್ನು ತಲೆಗಳ ಮೇಲೆ ಬ್ರಹ್ಮಸ್ಥಾನವಾದ ಮಧ್ಯಭಾಗದಲ್ಲಿ ಅವರ ಕೂದಲುಗಳನ್ನು ಮುಡಿಹಾಕಿದ್ದಾರೆ. ಬ್ರಹ್ಮಸ್ಥಾನವು ಸಣ್ಣಮಕ್ಕಳ ತಲೆಯ ಮೇಲೆ ಪ್ರತ್ಯಕ್ಷವಾಗಿ ನೋಡಬಹುದು. ಒಂದು ವರ್ಷದೊಳಗಿರುವ ಮಕ್ಕಳ ತಲೆಗಳ ಮಧ್ಯಭಾಗದಲ್ಲಿ ಬ್ರಹ್ಮನಾಡಿ ಸ್ಪರ್ಶವನ್ನು ನೋಡಬಹುದು. ಆ ಭಾಗದಲ್ಲಿಯೇ ಜ್ಞಾನಶಿಖವನ್ನು ಜ್ಞಾನಿಗಳು ಹಾಕುತ್ತಿರುತ್ತಾರೆ. ಜ್ಞಾನಶಿಖ ಈ ಕಾಲದಲ್ಲಿ ಬಹುಜನರಿಗೆ ತಲೆಯ ಮಧ್ಯಭಾಗದಲ್ಲಿ ಇಲ್ಲದೇ ಸ್ವಲ್ಪ ಹಿಂದಕ್ಕೆ ಹೋಗಿದೆ. ಹೊರಗೆ ಜ್ಞಾನಶಿಖ ಎಲ್ಲಿದ್ದರೂ ಪರವಾಗಿಲ್ಲ. ನಮಗೆ ಒಳಗೆ ಮುಖ್ಯವಾದ ಜ್ಞಾನವಿದ್ದರೆ ಸಾಕು. ತೆಂಗಿನಕಾಯಿಯನ್ನು ಪರಿಶೀಲಿಸಿದಾಗ ಎಷ್ಟು ಅರ್ಥವಿದೆಯೋ ನೋಡಿರಿ. ತೆಂಗಿನಕಾಯಿಯನ್ನು ಜ್ಞಾನಸ್ವರೂಪವಾದ ವಿಷಯವಾಗಿ ಭಾವಿಸಬೇಕು.

ಅಗ್ನಿಯಿಂದ ಸಣ್ಣ ಸಣ್ಣ ಬೆಂಕಿಯ ಕಿಡಿಗಳು ಹೊರಬರುವಂತೆ ಪರಮಾತ್ಮನಿಂದ ಜೀವಿಯು ಹೊರಬಂದಿದ್ದಾನೆ. ಒಂದೇ ಅಂಶವಾಗಿದ್ದರೂ ಜೀವಿಯೆಂದು ದೇವರೆಂದು ಬೇರೆಯಾಗಿದ್ದಾರೆ. ಈ ವಿಧವಾಗಿಯೇ ಆತ್ಮ ಸ್ವರೂಪವಾದ ತೆಂಗಿನಕಾಯಿಯನ್ನು ಹೊಡೆದಾಗ ಎರಡು ಚಿಪ್ಪುಗಳಾಗಿ ಭಾಗವಾಗುತ್ತದೆ. ಅದರಲ್ಲಿನ ಒಂದು ಚಿಪ್ಪಿಗೆ ಜ್ಞಾನಶಿಖ ಉಳಿದುಹೋಗುತ್ತಿದೆ.

ಎರಡನೆಯ ಚಿಪ್ಪಿಗೆ ಏನು ಉಳಿಯದೇ ಹೋಗುತ್ತಿದೆ. ಜ್ಞಾನಶಿಖ ಉಳಿದ ಚಿಪ್ಪು ಆತ್ಮವಾಗಿಯೂ, ಜ್ಞಾನಶಿಖ ಇಲ್ಲದಂತೆ ಮೂರು ಭಾಗಗಳಾಗಿಯೇ ಉಳಿದಿರುವ ಎರಡನೆಯ ಚಿಪ್ಪು ಜೀವಾತ್ಮನಾಗಿಯೂ ಪರಿಗಣಿಸಲ್ಪಡುತ್ತಿವೆ. ತೆಂಗಿನಕಾಯಿಯನ್ನು ಎರಡು ಚಿಪ್ಪುಗಳಾಗಿ ದೇವರ ಮುಂದೆ ಹೊಡೆದು ಒಬ್ಬನೇ ಪರಮಾತ್ಮನ ಅಂಶದಿಂದ ನೀನು ನಾನು ಬೇರೆಯಾಗಿದ್ದೇವೆಂಬ ಬಾಹ್ಯಾರ್ಥವಾಗಿ ತೋರಿಸುತ್ತಿದ್ದೇವೆ. ಈ ವಿಧವಾದ ಭಾವನೆಯಿಂದ ಪೂರ್ವದಲ್ಲಿ ಜ್ಞಾನಿಗಳು ಮಾಡುತ್ತಿದ್ದರು. ಈಗ ಕೆಲವರು ಯಾವ ಭಾವಯಿಲ್ಲದಿದ್ದರು ಕೋರಿಕೆಗಳು ಮಾತ್ರ ಬಹಳ ಇಟ್ಟುಕೊಂಡು ತೆಂಗಿನಕಾಯಿಗಳನ್ನು ಬಹಳ ಹೊಡೆಯುತ್ತಿದ್ದಾರೆ. ತೆಂಗಿನಕಾಯಿ ಹೊಡೆಯುವವರೆಲ್ಲರೂ ಅದರ ಒಂದು ಪ್ರಾಮುಖ್ಯತೆಯನ್ನು ತಿಳಿದುಕೊಂಡರೆ ಎಷ್ಟೋ ಶ್ರೇಯಸ್ಕರವಾಗಿರುತ್ತದೆ.

ತೆಂಗಿನಕಾಯಿ ಹೊಡೆದಾಗ ಎರಡು ಭಾಗಗಳಾಗುತ್ತಿವೆಯಲ್ಲವೆ! ಆ ಎರಡು ಚಿಪ್ಪುಗಳ ಒಳಗಿನ ಭಾಗವು ಬಿಳಿಯ ಬಣ್ಣವಿದ್ದು ಯಾವ ಕಲ್ಮಶವೂ ಇಲ್ಲದೆ ಇರುತ್ತದೆ. ಅದರ ಅರ್ಥವೇನೆಂದರೆ ನೀನು ದೇವರು, ನಾನು ಜೀವಿಯು, ನೀನು ಯಾವ ಗುಣಗಳೂ ಇಲ್ಲದೆ ನಿಷ್ಕಲ್ಮಷವಾಗಿದ್ದಿಯ. ನಾನೂ ಸಹ ನಿನ್ನ ಹಾಗೆಯೇ ಯಾವ ಕೋರಿಕೆಗಳು, ಯಾವ ಯೋಚನೆಗಳು ಇಲ್ಲದೆ ನಿಷ್ಕಲ್ಮಶವಾಗಿ ಬದಲಾಗಿದ್ದೇನೆಂದು, ಬಾಹ್ಯಾರ್ಥವಾಗಿ ತಿಳಿಸುವುದಕ್ಕೆ ಎರಡು ಚಿಪ್ಪುಗಳು ಬಿಳುಪಾಗಿವೆ. ಈ ವಿಧವಾಗಿ ಜ್ಞಾನಿಗಳು ತೆಂಗಿನಕಾಯಿಗಳನ್ನು ಹೊಡೆದು ಬಾಹ್ಯಾರ್ಥವಾಗಿ ತೋರಿಸಿದ್ದಾರೆ, ಮತ್ತು ಎರಡಾಗಿ ಬದಲಾದ ನೀನು, ನಾನು ಏಕವಾಗಬೇಕೆಂದು ಬಾಹ್ಯಾರ್ಥವಾಗಿಯೇ ಎರಡು ಕೈಗಳನ್ನು ಜೋಡಿಸಿ ತೋರಿಸಿದ್ದಾರೆ ಅದನ್ನೇ ನಾವು ನಮಸ್ಕಾರ ಎನ್ನುತ್ತಿದ್ದೇವೆ. ಎಡ ಹಸ್ತವು ಆತ್ಮವೆಂದು, ಬಲ ಹಸ್ತವು ಜೀವಾತ್ಮವೆಂದು ಆ ಎರಡು ಹಸ್ತಗಳನ್ನು ಜೋಡಿಸುವುದು ಜೀವಾತ್ಮ, ಆತ್ಮರು ಐಕ್ಯವಾಗುವುದೆಂದು ತಿಳಿದುಕೊಳ್ಳಬೇಕು. ಹಿಂದಿನಕಾಲದಲ್ಲಿ ತಿಳಿದವರು ಬಾಯಿಯಿಂದ ಏನನ್ನು ಮಾತನಾಡದೆ ಅವರಲ್ಲಿದ್ದ ಭಾವನೆಯನ್ನು ತೆಂಗಿನಕಾಯಿ ಮೂಲಕ ನಮಸ್ಕಾರದ ಮೂಲಕ ಬಾಹ್ಯಾರ್ಥವಾಗಿ

ದೇವರಿಗೆ ತಿಳಿಸುತ್ತಿದ್ದರು. ಈ ಕಾಲದಲ್ಲಿ ಅನೇಕ ವಿಧವಾದ ಕೋರಿಕೆಗಳಿಂದ ಪವಿತ್ರವಾದ ತೆಂಗಿನಕಾಯಿಗಳನ್ನು ಅಪವಿತ್ರ ಮಾಡುತ್ತಿದ್ದಾರೆ. ಎರಡು ಕೈಗಳನ್ನು ಜೋಡಿಸಿ ತೋರಿಸುವುದರಲ್ಲಿ ಜೀವಾತ್ಮ, ಆತ್ಮಗಳ ಐಕ್ಯಾರ್ಥವಿದೆ ಎಂದು ತಿಳಿಯದೆ ಕರಗಳನ್ನು ಜೋಡಿಸಿ ನಿಂತುಕೊಂಡು ಅನೇಕ ವಿಧವಾದ ಕೋರಿಕೆಗಳು ಬೇಕಾಗಿರುವವುಗಳನ್ನು, ಬೇಕಿಲ್ಲದವುಗಳನ್ನು ಕೋರುತ್ತಿದ್ದಾರೆ.

ತೆಂಗಿನಕಾಯಿಗಿರುವ ಕಣ್ಣುಗಳಲ್ಲಿ ಒಂದು ಕಣ್ಣಿಗೆ ಮಾತ್ರ ರಂಧ್ರ ಬೀಳುತ್ತದೆ. ಉಳಿದವುಗಳಿಗೆ ಏಕೆ ಬೀಳುವುದಿಲ್ಲ? ಮತ್ತು ಅದರೊಳಗಿನ ನೀರನ್ನು ಎಲ್ಲರೂ ತೀರ್ಥವೆಂದು ಸ್ವೀಕರಿಸುತ್ತಿದ್ದಾರೆ. ಅದರ ಫಲಿತ ಏನಾಗಿರಬಹುದು? ಎಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ನನ್ನ ಸಮಾಧಾನ ಜೀವಿಯು ಪರಮಾತ್ಮನನ್ನು ಸೇರಬೇಕೆಂದರೆ ತನ್ನ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿಯೇ ಐಕ್ಯವಾಗಬೇಕು. ಆದ್ದರಿಂದ ತೆಂಗಿನಕಾಯಿಯ ಕಣ್ಣುಗಳಲ್ಲಿಯೂ ಸಹ ಬ್ರಹ್ಮನಾಡಿ ಎನಿಸಿಕೊಳ್ಳುವ ದೊಡ್ಡ ಭಾಗದ ಮೇಲೆ ಇರುವ ಕಣ್ಣೇ ರಂಧ್ರ ಬೀಳುತ್ತದೆ. ಉಳಿದ ನಾಡಿಗಳಲ್ಲಿರುವಾಗ ಮರಣಿಸಿದ ಜೀವಿಯು ಆತ್ಮನನ್ನು ಸೇರಲಾರದು. ಆದ್ದರಿಂದ ತೆಂಗಿನಕಾಯಿಯ ಉಳಿದ ಕಣ್ಣುಗಳು ಗಟ್ಟಿಯಾಗಿದ್ದು ರಂಧ್ರಗಳು ಬೀಳುವುದಿಲ್ಲ. ನಾವು ಮಾಡಿದ ಪೂಜೆಯ ಒಂದು ಫಲಿತಾಂಶ ತೆಂಗಿನಕಾಯಿಯಲ್ಲಿನ ನೀರನ್ನು ಆವರಿಸಿರುತ್ತದೆ. ಆದ್ದರಿಂದ ಅದನ್ನು ತೀರ್ಥವಾಗಿ ತೆಗೆದುಕೊಳ್ಳುತ್ತಿದ್ದಾರೆ. ಯಾರೂ ಎಷ್ಟು ಭಾವನೆಯಿಂದ ಪೂಜೆ ಮಾಡಿರುತ್ತಾರೋ, ಅಷ್ಟು ಶಕ್ತಿಯೇ ಅವರು ತೆಗೆದುಕೊಂಡ ತೀರ್ಥದಲ್ಲಿರುತ್ತದೆ. ಆದ್ದರಿಂದ ಭಾವನೆಯಿಲ್ಲದ ಪೂಜೆ ವ್ಯರ್ಥ, ಇದರಿಂದ ತೀರ್ಥವೆಂದರೆ ಶಕ್ತಿಯಿಂದ ಕೂಡಿಕೊಂಡು ಇರುತ್ತದೆಂದು ತಿಳಿದು ಬರುತ್ತದೆ. ಪೂಜಾ ವಿಧಾನ ಭಾವನೆ ತಿಳಿಯದೇ ಅದರಲ್ಲಿನ ಭಕ್ತಿಯನ್ನು ಅನುಸರಿಸದೇ ಮಾಡಿದ ಪೂಜೆಯಾದರೆ ತೀರ್ಥವೂ ಸಹ ಶಕ್ತಿಯಿಲ್ಲದ್ದಾಗಿರುತ್ತದೆ.

ತೆಂಗಿನಕಾಯಿ ಹೊಡೆಯುವಾಗ ಜುಟ್ಟನ್ನು ಕೆಳಮುಖಮಾಡಿ ಹಿಡಿದುಕೊಂಡು ಬಹಳ ಜನರು ಹೊಡೆಯುತ್ತಿದ್ದಾರೆ. ಹಾಗೆ ಹೊಡೆಯುವುದು ಸರಿಯಾದ

ಪದ್ಧತಿಯಲ್ಲ. ತೆಂಗಿನಕಾಯಿ ಹೊಡೆಯುವಾಗ ಜುಟ್ಟನ್ನು ಮೇಲಕ್ಕೆ ಇರಿಸಿ ತೋರಿಸಿ ಹೊಡೆಯಬೇಕು. ಈ ವಿಧವಾಗಿ ಹೊಡೆದರೆ ಬಲಗೈಯಲ್ಲಿ ಕೆಳಗಿನ ಚಿಪ್ಪು ಉಳಿಯುತ್ತದೆ. ಜುಟ್ಟು ಇರುವ ಚಿಪ್ಪು ಎಡಗೈಯಲ್ಲೇ ಉಳಿಯುತ್ತದೆ. ಮತ್ತೆ ಎಡ ಬಲ ಕೈಗಳು ಜೋಡಿಸಿ ತೋರಿಸುವುದೇ ನನ್ನನ್ನು ನಿನ್ನೊಳಗೆ ಸೇರಿಸಿಕೋ ಎಂಬ ಭಾವನೆ. ಈ ವಿಧವಾಗಿ ಸರಿಯಾದ ಭಾವನೆಯಿಂದ ಪೂಜೆ ಮಾಡಿದಲ್ಲಿ ಆ ಪೂಜೆಯಿಂದ ಜ್ಞಾನಶಕ್ತಿ ಲಭಿಸುತ್ತದೆ. ಜ್ಞಾನದಿಂದ ಮುಂದೆ ಸರಿಯಾದ ಮಾರ್ಗಗಳನ್ನು ತಿಳಿದುಕೊಂಡು ಯೋಗಸಾಧನೆಗಳನ್ನು ಮಾಡಿ ದೇವರಲ್ಲಿ ಐಕ್ಯವಾಗಬಹುದು. ಆ ವಿಧವಾಗಲ್ಲದೆ ಭಾವನೆ ಇಲ್ಲದ ಪೂಜೆ ವ್ಯರ್ಥ. ತೆಂಗಿನಕಾಯಿಗೆ ಕೊಟ್ಟ ಹಣವೂ ಸಹ ವ್ಯರ್ಥ. ತೆಂಗಿನಕಾಯಿ ಯಲ್ಲಿಯೂ, ಗಂಟೆಯಲ್ಲಿಯೂ, ನಮಸ್ಕಾರದಲ್ಲಿಯೂ ಎಷ್ಟೋ ಅರ್ಥವಿದೆ. ಅದನ್ನು ತಿಳಿದುಕೊಳ್ಳಲಾರದೇ ಇತರರು ಮಾಡುತ್ತಿರುವುದನ್ನು ನೋಡಿ. ನಾವು ಮಾಡುತ್ತಿದ್ದೇವೆಂದರೆ ಯಾವ ಪ್ರಯೋಜನವೂ ಇರುವುದಿಲ್ಲ.

ಬ್ರಹ್ಮ ವಿದ್ಯೆಯಲ್ಲಿ ಪ್ರವೇಶವಿರುವವರು ತೆಂಗಿನಕಾಯಿಯನ್ನು ಕುರಿತು ಹೇಳುತ್ತಿರುವುದನ್ನು ಕೇಳಿದ್ದೇವೆ. ಅದರಲ್ಲಿ ಅವರು ತೆಂಗಿನಕಾಯಿಯ ಮೂರು ಭಾಗಗಳನ್ನು ಮೂರು ಗುಣಗಳಾಗಿ ಭಾವಿಸಿಕೊಂಡು ಹೇಳುತ್ತಿದ್ದಾರೆ. ಮೂರು ಗುಣಗಳನ್ನು ಜಯಿಸದೆ ಇನ್ನೂ ಸ್ವಲ್ಪ ಗುಣಗಳಿರುವವರು ತೆಂಗಿನಕಾಯಿಗೂ ಸಹ ಜುಟ್ಟನ್ನು ಸ್ವಲ್ಪವಾಗಿ ಇಡುತ್ತಿದ್ದಾರೆ. ಮತ್ತು ಅವರೂ ಸಹ ತಮ್ಮ ತಲೆಗಳ ಮೇಲೆ ಸ್ವಲ್ಪವಾಗಿ ಜುಟ್ಟು ಇರಿಸಿಕೊಳ್ಳುತ್ತಿದ್ದಾರೆ. ಪೂರ್ತಿ ಗುಣಗಳನ್ನು ಜಯಿಸಿ ಗುಣಾತೀತರಾಗಿರುವವರು ಜುಟ್ಟನ್ನು ಇರಿಸಿಕೊಳ್ಳದೆ ತೆಗೆದುಹಾಕುತ್ತಿದ್ದಾರೆ. ಅವರು ತೆಂಗಿನಕಾಯಿಗೂ ಸಹ ಜುಟ್ಟು ಇಲ್ಲದಂತೆ ಎಲ್ಲ ಸುಲಿದು ಹೊಡೆಯುತ್ತಿದ್ದರು ಎಂದು ತಿಳಿಸಿದ್ದಾರೆ. ಆ ಮಾರ್ಗವಾಗಿ ತೆಂಗಿನಕಾಯಿಯನ್ನು ಭಾವಿಸಿದ ಆ ಭಾವನೆಯಲ್ಲಿ ಅನೇಕ ಸಂಶಯಗಳು ಹೊರಬರುತ್ತವೆ. ಎಷ್ಟು ಹುಡುಕಿದರು ಆ ಸಂಶಯಗಳಿಗೆ ಸಮಾಧಾನಗಳು ಸಿಗುತ್ತಿಲ್ಲ. ಆದ್ದರಿಂದ ಆತ್ಮವೇ ಊಹೆಗೆ ಒದಗಿಸಿ ತಿಳಿಸಿರುವುದನ್ನು ನಾನು ತಿಳಿಸುತ್ತಿದ್ದೇನೆ. ಈ ಮಾರ್ಗದಲ್ಲಿ ಹೋದರೆ

ಒಂದು ಸಂಶಯವೂ ಸಹ ಹೊರ ಬರುವುದಿಲ್ಲ. ಒಂದು ವೇಳೆ ಹೊರಬಂದಲ್ಲಿ ಅದಕ್ಕೆ ಸಮಾಧಾನ ಕೂಡಲೇ ಲಭ್ಯವಾಗುತ್ತದೆ.

# 26. ತಲೆಕೂದಲು ಸಮರ್ಪಿಸುವುದು

ದೇವಾಲಯಗಳಲ್ಲಿ ನಡೆಯುವ ಆರಾಧನೆಗಳಲ್ಲಿ ತಲೆಕೂದಲು ತೆಗೆಸಿ ಕೊಂಡು ಬೋಳು ಮಾಡಿಸಿಕೊಳ್ಳುವುದು ಮುಖ್ಯವಾದುದಾಗಿದೆ. ಪೂರ್ವ ಕಾಲದಲ್ಲಿ ತಿಳಿದ ದೊಡ್ಡವರು ಭಾವ ಸಹಿತವಾಗಿ ತಲೆಯ ಮೇಲಿನ ಕೂದಲನ್ನು ತೆಗೆದುಹಾಕಿ ತಲೆಯನ್ನು ಬೋಳು ಮಾಡಿಸಿಕೊಳ್ಳುತ್ತಿದ್ದರು. ಹಾಗೆ ದೈವ ಸನ್ನಿಧಿಯಲ್ಲಿ ಅವರ ಮನಸ್ಸಿನಲ್ಲಿದ್ದ ಉದ್ದೇಶವನ್ನು ಆಚರಣೆಯ ರೂಪದಲ್ಲಿ ತೋರಿಸಿದ್ದಾರೆ. ಆ ಆಚರಣೆಯ ಒಂದು ಭಾವನೆ ಪೂರ್ವದ ಹಿರಿಯರೊಂದಿಗೆ ಅಳಿಸಿ ಹೋಗಿದ್ದರೂ ಆಚರಣೆ ಮಾತ್ರ ಅಂದಿಗಿಂತಲೂ ಇಂದೇ ಹೆಚ್ಚಾಗಿದೆ. ಚಿತ್ತಶುದ್ಧಿ ಇಲ್ಲದ ಶಿವಪೂಜೆಗಳು ಏತಕ್ಕೆ ಎನ್ನುವಂತೆ ಭಾವಶುದ್ಧಿ ಇಲ್ಲದ ಆಚರಣೆಯೂ ಸಹ ಪ್ರಯೋಜನವಿಲ್ಲ. ಪೂರ್ವಕಾಲಕ್ಕಿಂತಲೂ ಇಂದಿನ ಕಾಲದಲ್ಲಿ ಭಕ್ತಿ ಹೆಚ್ಚಾಗಿ ಕಾಣಿಸುತ್ತಿದ್ದರೂ, ಭಕ್ತಿಯಿಂದ ಮಾಡುವ ಕೆಲಸಗಳಿಗೆ ಅರ್ಥವಿಲ್ಲದೇ ಹೋಗಿದೆ. ದೇವಸ್ಥಾನದಲ್ಲಿ ಗುಂಡು ಮಾಡಿಸಿಕೊಂಡಿರುವವರ ಬಳಿಗೆ ಹೋಗಿ ನೀನು ಏತಕ್ಕಾಗಿ ಬೋಳು ಮಾಡಿಸಿಕೊಂಡಿದ್ದೀಯೆಂದು ಪ್ರಶ್ನಿಸಿದರೆ ಅವರಿಂದ ಬರುವ ಸಮಾಧಾನ, ನನ್ನ ಕೋರಿಕೆ ನೆರವೇರಿದೆ ಆದ್ದರಿಂದ ನನ್ನ ಹರಕೆಯಂತೆ ಬೋಳು ಮಾಡಿಸಿಕೊಂಡು ದೇವರಿಗೆ ಕೂದಲು ಸಮರ್ಪಿಸಿದ್ದೇವೆ ಎನ್ನುತ್ತಾರೆ. ನಿನಗೆ ಕೋರಿಕೆ ನೆರವೇರಿದೆ ಆದರೆ ನೀನು ಕೊಡುವ ಕೂದಲುಗಳಿಂದ ದೇವರಿಗೆ ಏನು ಲಾಭ. ದೇವರಿಗೆ ಹರಕೆಯಿದ್ದರೆ ಧನ ಕೊಡಬಹುದು, ಧಾನ್ಯ ಕೊಡಬಹುದು, ಕೂದಲು ಕೊಡುವುದು ಏನೆಂದು ಪ್ರಶ್ನಿಸಿದಲ್ಲಿ ಎಲ್ಲರೂ ಮಾಡುವಂತೆ ನಾನು ಮಾಡುತ್ತಿದ್ದೇನೆ ಎನ್ನುವುದು ಹೊರತು ಸರಿಯಾದ ಸಮಾಧಾನ ಇರುವುದಿಲ್ಲ. ಎಲ್ಲರೂ ಏತಕ್ಕಾಗಿ ಮಾಡುತ್ತಿದ್ದಾರೆನ್ನುವುದು

ಯಾರಿಗೂ ತಿಳಿದಿಲ್ಲ. ಒಬ್ಬರನ್ನು ನೋಡಿ ಮತ್ತೊಬ್ಬರು ಮಾಡುತ್ತಿದ್ದಾರೇ ಹೊರತು ಎದುರಿಗಿರುವವನು ಏತಕ್ಕಾಗಿ ಹೀಗೆ ಮಾಡುತ್ತಿದ್ದಾನೆ ಎಂಬ ವಿವರವನ್ನು ತಿಳಿದುಕೊಳ್ಳದೆ ಹೋಗಿದ್ದಾರೆ. ಈ ವಿಷಯದಲ್ಲಿ ಎಲ್ಲರಿಗೂ ಪೂರ್ತಿಯಾಗಿ ಅವಗಾಹನೆ ಇಲ್ಲದೇ ಹೋಗಿದೆಯೆಂದೇ ಹೇಳಬಹುದು. ಮಾಡುವವನಿಗೆ ತಿಳಿಯುವುದಿಲ್ಲ, ನೋಡುವವನಿಗೂ ತಿಳಿಯುವುದಿಲ್ಲ, ಆದ್ದರಿಂದ ನೋಡುವವನು ಮಾಡುವವನಂತೆ ಬದಲಾಗಿ ಹೋಗುವುದು ಗುಂಡು (ಬೋಳು) ಮಾಡಿಸಿಕೊಳ್ಳುವುದು ಅರ್ಥವಿಲ್ಲದ ಭಕ್ತಿಯಾಗಿದೆ.

ಪೂರ್ವಕಾಲದಲ್ಲಿ ನಿಜವಾದ ಭಕ್ತಿ ಇರುವವರು ಇರುತ್ತಿದ್ದರು. ಅವರು ದೈವಭಕ್ತಿ ವಿಷಯದಲ್ಲಿ ಎಷ್ಟೋ ಅರ್ಥದಿಂದ ಕೂಡಿದ್ದ ಕೆಲಸಗಳನ್ನು ಮಾಡುತ್ತಿದ್ದರು. ಆ ಕಾಲದಲ್ಲಿ ಅವರು ದೇವಾಲಯಗಳಲ್ಲಿ ಜ್ಞಾನಯುಕ್ತವಾದ ಭಾವನೆಗಳಿಂದ ಇರುತ್ತಿದ್ದರು. ದೇವಾಲಯಗಳಲ್ಲಿ ಯಾವ ಕೋರಿಕೆಗಳನ್ನು ಕೋರುತ್ತಿರಲಿಲ್ಲ. ಗೋಪುರದ ಬಳಿಯಿರುವ ಕೋರಿಕೆಗಳನ್ನು ಧ್ವಜಸ್ಥಂಭದ ಬಳಿಯಲ್ಲೇ ಇಲ್ಲದಂತೆ ಮಾಡಿಕೊಳ್ಳುತ್ತಿದ್ದರು. ಒಂದು ವೇಳೆ ಯಾವುದೇ ಆಲೋಚನೆ ಇದ್ದರೂ ಕೊನೆಗೆ ಗಂಟೆಯ ನಾದದಲ್ಲಿ ಮನಸ್ಸನ್ನು ಬೆರೆಸಿ ಮನಸ್ಸನ್ನು ನಿರ್ಮಲವಾಗಿ ಮಾಡಿ ದೇವರ ಮೇಲೆ ಲಗ್ನ ಮಾಡುತ್ತಿದ್ದರು. ಮನಸ್ಸಿನಲ್ಲಿ ಕೋರಿಕೆಗಳು ಇದ್ದರೂ ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ದೇವಾಲಯ ಗಳಿಗೆ ಬಂದು ಅಲ್ಲಿರುವ ಆಧ್ಯಾತ್ಮಿಕತೆಯನ್ನು ಬೆಳೆಸಿಕೊಳ್ಳುತ್ತಿದ್ದರು. ಇನ್ನು ಜ್ಞಾನಿಗಳಾದವರು ಮನಸ್ಸಿನಲ್ಲಿ ಯಾವ ಕೋರಿಕೆಗಳು ಇಲ್ಲವೆಂದು ಆಚರಣೆಯಲ್ಲಿ ತಿಳಿಯಪಡಿಸಿಕೊಳ್ಳುತ್ತಿದ್ದರು. ಹಾಗೆ ದೇವರಿಗೆ ವಿನಂತಿಸಿ ಕೊಳ್ಳುವುದೇ ಬೋಳು ಮಾಡಿಸಿಕೊಳ್ಳುವುದು. ಒಂದು ಸಮಯದಲ್ಲಿ ಜ್ಞಾನ ತಿಳಿದಿರುವ ಭಕ್ತನು ತಿರುಪತಿ ವೆಂಕಟೇಶ್ವರಸ್ವಾಮಿ ಆಲಯಕ್ಕೆ ಹೋಗಿ ಕೋರಿಕೆಗಳಿಗೂ ಆಲೋಚನೆಗಳಿಗೂ ತಲೆ ನಿಲಯ ವಾಗಿದೆ ಎಂದು ತಿಳಿದು, ತಲೆಯಲ್ಲಿನ ಆಲೋಚನೆಗಳು ಲೆಕ್ಕವಿಲ್ಲದಷ್ಟು ತಲೆಯ ಮೇಲಿನ ಕೂದಲುಗಳಂತೆ ಇರುತ್ತವೆಂದು ತಿಳಿದು, ನಿನ್ನ ಸನ್ನಿಧಾನಕ್ಕೆ ಬಂದಿರುವ ನನಗೆ ಪ್ರಪಂಚ ಸಂಬಂಧವಾದ ಯಾವ

ಕೋರಿಕೆಗಳು ಇಲ್ಲವೆಂದು ದೇವರಿಗೆ ತಿಳಿಯಪಡಿಸುವಂತೆ ತಲೆಯ ಮೇಲಿನ ಕೂದಲುಗಳನ್ನೆಲ್ಲ ತೆಗೆಸಿ ಬೋಳು ಮಾಡಿಸಿಕೊಂಡು ನಾನು ಸಂಕಲ್ಪ ರಹಿತನಾಗಿದ್ದೇನೆ, ತಲೆಯ ಮೇಲಿನ ಕೂದಲುಗಳಂತೆ ತಲೆಯೊಳಗೆ ಕೋರಿಕೆ ಗಳಿರುವುದು ಸಹಜವೇ, ನಾನು ನನ್ನ ತಲೆಯಲ್ಲಿನ ಕೋರಿಕೆಗಳನ್ನು ಇಲ್ಲದಂತೆ ಮಾಡಿಕೊಂಡಿದ್ದೇನೆಂದು ನಿನಗೆ ತಿಳಿಸುವುದಕ್ಕೆ ಬಾಹ್ಯಾರ್ಥವಾಗಿ ನನ್ನ ತಲೆಯ ಕೂದಲುಗಳನ್ನು ಇಲ್ಲದಂತೆ ಮಾಡಿಕೊಂಡಿದ್ದೇನೆಂದು ತನ್ನ ಬೋಳು ತಲೆಯನ್ನು ತಲೆ ತಗ್ಗಿಸಿ ಗುಡಿಯಲ್ಲಿನ ದೇವರಿಗೆ ತೋರಿಸಿದನಂತೆ. ಆ ದೃಶ್ಯದ ವಿವರ ತಿಳಿಯದ ಮತ್ತೊಬ್ಬನು ನೋಡಿದ್ದಾನೆ. ಹಾಗೆ ಮಾಡುವು ದರಿಂದ ಏನೋ ಲಾಭ ಬರುತ್ತದೆಂದು ತಿಳಿದು, ಅದರಿಂದಲೇ ಆತನು ಹಾಗೆ ಮಾಡಿದ್ದಾನೆಂದು ಕೊಂಡು, ನನಗೆ ಲಾಭ ಬಂದರೆ ನಾನು ಬೋಳು ಮಾಡಿಸಿ ಕೊಳ್ಳುತ್ತೇನೆಂದು ಕೈ ಮುಗಿದುಕೊಂಡಿದ್ದಾನೆ. ಅಂತಹ ಆ ವಿಧಾನವನ್ನು ಕೋರಿಕೆಗಳನ್ನು ಕೋರುವುದಕ್ಕೆಂದು, ದೇವರು ಕೋರಿಕೆಗಳನ್ನು ನೆರವೇರಿಸುವ ವನೆಂದು, ಆ ಕೆಲಸ ಮಾಡಿದ್ದಕ್ಕಾಗಿ ಪ್ರತಿಫಲವಾಗಿ ತಲೆಯ ಕೂದಲುಗಳನ್ನು ಕೊಡಬೇಕೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಪೂರ್ವದ ಜ್ಞಾನವು ಕಣ್ಮರೆಯಾಗಿ ಹೋಗಿರುವುದರಿಂದ ದೇವರಿಗು ನಮಗು ಮಧ್ಯದಲ್ಲಿ ತಲೆಗೂದಲು ಲಂಚವಾಗಿ ಬದಲಾಗಿವೆ. ಯೋಚನೆಗಳೆಲ್ಲ ಹೋಗಿವೆ ಎಂಬುದಕ್ಕೆ ಗುರುತಾಗಿ ಪೂರ್ವದಲ್ಲಿ ತಲೆಯನ್ನು ಬೋಳು ಮಾಡಿಸಿಕೊಳ್ಳುತ್ತಿದ್ದರೆ ಇಂದು ಆ ಪದ್ಧತಿ ಇಲ್ಲದೆ ಬೋಳು ಮಾಡಿಸಿಕೊಳ್ಳುತ್ತಿದ್ದಾರೆ. ಆದ್ದರಿಂದ ವೇಮನಯೋಗಿ ತನ್ನ ಪದ್ಯದಲ್ಲಿ ತಲೆಗಳು ಬೋಳಾದರೂ ತಲೆಯಲ್ಲಿನ ಯೋಚನೆಗಳು ಬೋಳಾ ಗುತ್ತಿವೆಯಾ ಎಂದಿದ್ದಾನೆ.

ಆ ದಿನ ಕೋರಿಕೆಗಳು ಇಲ್ಲ ಎಂಬ ಉದ್ದೇಶದಿಂದ ಅವರು ತಲೆ ಬೋಳು ಮಾಡಿಕೊಂಡರೆ ಇಂದು ಕೋರಿಕೆಗಳು ಉಂಟಾಗಿ ಅವು ನೆರವೇರಿದರೆ ಬೋಳು (ಗುಂಡು) ಮಾಡಿಸಿಕೊಳ್ಳುತ್ತೇವೆಂದು ಕೈ ಮುಗಿದು ನೆರವೇರಿದರೆ ಮಾಡಿಸಿಕೊಳ್ಳುವುದು ವಿಪರೀತವಾದ ತಪ್ಪು ಪದ್ಧತಿಯಲ್ಲವೇ! ತಪ್ಪು ಪದ್ಧತಿಯಾಗಿ

ಕೋರುವುದೇ ಅಲ್ಲದೆ ಕೋರಬಾರದ ಕೋರಿಕೆಗಳನ್ನು ಸಹ ಕೋರುತ್ತಿದ್ದಾರೆ. ಅಣ್ಣ ತಮ್ಮಂದಿರು ಸತ್ತು ಹೋಗುವಂತೆ ಮಾಡಿ ಆಸ್ತಿಯೆಲ್ಲಾ ನನಗೆ ಬಂದರೆ ಕೂದಲುಗಳು ತೆಗೆಸಿಕೊಳ್ಳುತ್ತೇನೆನ್ನುವುದು, ಅತ್ತೆಯವರಿಗಿರುವ ಒಬ್ಬ ಮಗನನ್ನು ಸತ್ತು ಹೋಗುವಂತೆ ಮಾಡಿ ಅತ್ತೆಯವರ ಆಸ್ತಿಯೆಲ್ಲಾ ನನಗೆ ಬಂದರೆ ನಿನಗೆ ಹರಕೆ ಮಾಡಿಕೊಂಡಂತೆ ತಲೆ ಕೂದಲು ಕೊಡುತ್ತೇವೆನ್ನುವುದು, ವಿದ್ಯಾರ್ಥಿಗಳು ಓದದಿದ್ದರೂ ಪಾಸಾಗುವಂತೆ ಮಾಡಿದರೆ ಬೋಳು ಮಾಡಿಸಿಕೊಳ್ಳುತ್ತೇನೆಂದು ಕೈ ಮುಗಿಯುವುದು ಸಹ ನಡೆಯುತ್ತಿದೆ. ಪೂರ್ವದಲ್ಲಿ ಹಿರಿಯರು ಕೋರಿಕೆ ಗಳಿಲ್ಲದ ಪದ್ಧತಿಯಾಗಿ ಗುಂಡುಮಾಡಿಸಿಕೊಂಡರೆ ಇಂದು ಬೋಳು ಮಾಡಿಸಿಕೊಳ್ಳುತ್ತೇ ನೆಂದು ಕೈ ಮುಗಿದು ವಿಪರೀತವಾಗಿ ಕೋರಿಕೆಗಳು ಕೋರುವುದನ್ನು ನೋಡುತ್ತಿದ್ದರೆ, ಧರ್ಮಗಳು ಅಧರ್ಮಗಳಾಗಿ ಬದಲಾ ದಂತೆಯೇ ಎನಿಸುತ್ತದೆ. ಈಗ ಅಧರ್ಮಗಳಾಗಿರುವ ಆಚರಣೆಗಳನ್ನು ಪುನಃ ಧರ್ಮಗಳಾಗಿ ಬದಲಾಯಿಸಿಕೊಂಡು ಸರಿಯಾದ ಪದ್ಧತಿಯನ್ನು ನಾವಾದರೂ ಅನುಸರಿಸೋಣ.

# 27. ನಮಸ್ಕಾರ

ದೈವಾರಾಧನೆಯಲ್ಲಿ ನಮಸ್ಕಾರ ಬಹಳ ಮುಖ್ಯವಾದುದು. ಎರಡು ಹಸ್ತಗಳನ್ನು ಜೋಡಿಸಿ ತೋರಿಸುವುದನ್ನು ನಮಸ್ಕಾರವೆನ್ನುತ್ತೇವೆ. ಎದುರಿಗಿರು ವವರ ಬಗೆಗೆ ಪೂಜ್ಯಭಾವನೆಯನ್ನು ಗೌರವಭಾವನೆಯನ್ನು ಕೈಗಳ ಮೂಲಕ ಪ್ರಕಟಿಸುವುದೇ ನಮಸ್ಕಾರವೆಂದು ಕೆಲವರು ಹೇಳುತ್ತಿದ್ದಾರೆ. ಈಗ ಅದು ನಿಜವೇ ಆಗಿದ್ದರೂ ಪೂರ್ವದ ಹಿರಿಯರಲ್ಲಿ ಮತ್ತಷ್ಟು ಬೇರೆ ಭಾವನೆ ಇರುತ್ತಿತ್ತು. ಎರಡು ಬಿಡಿ ಬಿಡಿಯಾಗಿರುವ ಕೈಗಳನ್ನು ದೇವಾಲಯಗಳಲ್ಲಿನ ಪ್ರತಿಮೆಗಳ ಮುಂದೆ ತೋರಿಸುತ್ತಿದ್ದರು. ಇಲ್ಲಿಯವರೆಗೂ ನಾನು ನೀನು ಬೇರೆ ಬೇರೆಯಾಗಿದ್ದೇವೆ. ಈಗಿನಿಂದ ನಾನು ನಿನ್ನೊಂದಿಗೆ ಸೇರಿ ಹೋಗಬೇಕೆಂದು



**(ನಮಸ್ಕಾರ)**

ಅಂದುಕೊಳ್ಳುತ್ತಿದ್ದೇನೆ ಎಂಬ ಭಾವನೆಯಿಂದ ಬಿಡಿ ಬಿಡಿಯಾಗಿದ್ದ ಕೈಗಳನ್ನು ಜೋಡಿಸಿ ತೋರಿಸುತ್ತಿದ್ದರು. ನಮಸ್ಕಾರ ಅಂದಿನವರ ಭಾವನೆಯಲ್ಲಿ ಜೀವ ಬ್ರಹ್ಮೈಕ್ಯ ಸಂಧಾನವಾಗಿ ಇಲ್ಲದೆ ಮೋಕ್ಷವಾಗಿ ಇರುತ್ತಿತ್ತು. ಪೂರ್ವದಲ್ಲಿ ಜ್ಞಾನ ತಿಳಿದವರಿದ್ದರು, ಆದ್ದರಿಂದ ಅವರಿಗೆ ಗುಡಿಯಲ್ಲಿನ ದೇವರೇ ಜ್ಞಾನಶಕ್ತಿ ಹೊಂದಿದವರ ಶರೀರಗಳಲ್ಲಿ ಇದ್ದಾನೆಂಬ ಭಾವನೆ ಇರುತಿತ್ತು. ಆದ್ದರಿಂದ ಜ್ಞಾನಿಯಾಗಲಿ, ಗುರುವಾಗಲಿ ಎದುರಿಗೆ ಬಂದಾಗ ಅವರಲ್ಲಿಯೂ ಸಹ ದೈವತ್ವವಿದೆ ಎಂಬ ಭಾವನೆ ಉಂಟಾಗಿ ಆ ದೈವಕ್ಕೆ ನಮಸ್ಕರಿಸುತ್ತಿದ್ದರು. ಆ ಸಂಪ್ರದಾಯ ಈಗಲೂ ಇದ್ದರೂ ಅವರೊಳಗಿನ ದೇವರಿಗೆ ನಮಸ್ಕರಿಸುತ್ತಿದ್ದೇನೆಂಬ ಭಾವನೆಯೇ ಇಲ್ಲವಾಗಿದೆ. ಎದುರಿಗಿರುವವನೊಂದಿಗೆ ಕೆಲಸ ಮಾಡಿಸಿಕೊಳ್ಳಲು, ಅಥವಾ ಎದುರಿಗಿರುವವನನ್ನು ಅನುಕೂಲವಾಗಿ ಬದಲಿಸಿಕೊಳ್ಳಲು ನಮಸ್ಕಾರ ಮಾಡುವುದು ನಡೆಯುತ್ತಿದೆ.

ಪೂರ್ವದಲ್ಲಿ ಜ್ಞಾನವಿರುವವರು ಪ್ರತಿಮನುಷ್ಯನಲ್ಲಿ ಜ್ಞಾನವನ್ನು ಅನುಸರಿಸಿ ದೈವವನ್ನು ನೋಡುತ್ತಿದ್ದರು. ಈಗ ಪ್ರತಿಮನುಷ್ಯನಲ್ಲಿ ಜ್ಞಾನವನ್ನು ನೋಡದೆ ಪ್ರಪಂಚದ ಅಂತಸ್ತ (ಸ್ಥಾನವ)ನ್ನು ನೋಡುತ್ತಿದ್ದಾರೆ. ಪೂರ್ವದಲ್ಲಿ

ಜ್ಞಾನವನ್ನು ಅನುಸರಿಸಿ ಪೂಜ್ಯಭಾವನೆಯಿದ್ದರೂ ಈಗ ಸ್ಥಾನವನ್ನು ಅನುಸರಿಸಿ ಪೂಜ್ಯಭಾವನೆಯಿದೆ. ಪೂರ್ವದಲ್ಲಿ ತಮ್ಮ ಕಾಲು ಇತರರಿಗೆ ತಾಕಿದರೂ ಅವರ ಶರೀರದಲ್ಲಿಯೂ ಸಹ ದೇವರಿದ್ದಾನೆಂಬ ಭಾವನೆಯಿಂದ ಕೂಡಲೇ ನಮಸ್ಕಾರ ಮಾಡುತ್ತಿದ್ದರು. ಈಗಲೂ ಕೆಲವು ಸ್ಥಳಗಳಲ್ಲಿ ಆ ಆಚಾರವಿದೆ. ಎಲ್ಲಿ ಯಾವ ಭಾವನೆಯಿದ್ದರೂ ದೇವಾಲಯದೊಳಗಿನ ನಮಸ್ಕಾರಕ್ಕೆ ನನ್ನನ್ನು ನಿನ್ನೊಳಗೆ ಸೇರಿಸಿಕೊಳ್ಳಬೇಕೆಂದು ಕೈಗಳನ್ನು ಜೋಡಿಸುವುದೆಂದು ತಿಳಿದರೆ ಗುಡಿಯಲ್ಲಿ ಮಾಡಿದ ನಮಸ್ಕಾರಕ್ಕೆ ಸ್ವಲ್ಪ ಅರ್ಥವಿರುತ್ತದೆ. ಹಾಗೆ ಅಲ್ಲದೆಹೋದರೆ ರೌಡಿಗಳಿಗೆ, ಗೂಂಡಾಗಳಿಗೆ, ರಾಜಕೀಯ ನಾಯಕರಿಗೆ, ಪೊಲೀಸರಿಗೆ ಮಾಡಿದ ನಮಸ್ಕಾರಕ್ಕೆ ಸಮಾನವಾಗಿರುತ್ತದೆ. ಹಾಗೆ ಆಗದಂತೆ ದೇವಾಲಯದಲ್ಲಿನ ನಮಸ್ಕಾರ ಪ್ರತ್ಯೇಕ ವಾದುದೆಂದು ತಿಳಿಯಬೇಕು.

# 28. ಶಠ ಗೋಪ

ಆಲಯ ಪೂಜೆಯಲ್ಲಿ ಭಕ್ತರಿಗೆ ಪೂಜಾರಿಗಳು ಶಠಗೋಪ ತಲೆಯ ಮೇಲೆ ತಾಕಿಸಿ ಕಳುಹಿಸುತ್ತಾರೆ. ಟೋಪಿ ಆಕಾರವಿರುವ ಶಠಗೋಪವನ್ನು ತಲೆಯ ಮೇಲೆ ಇರಿಸಿಕೊಳ್ಳುವುದು ಭಕ್ತರಿಗೆ ಒಂದು ವಿಧವಾದ ತೃಪ್ತಿಯೇ ಆದರೂ ಅದರಿಂದ ಫಲಿತವೇನು? ಯಾವ ಉದ್ದೇಶದಿಂದ ಈ ಕಾರ್ಯವನ್ನು ಇಟ್ಟಿದ್ದಾರೆಂದು ಶಠಗೋಪ ಇಡುವವರಾಗಲಿ ಇರಿಸಿಕೊಳ್ಳುವವರಾಗಲಿ ಯೋಚಿಸುವುದಿಲ್ಲ. ಕೆಲವು ಆಲಯಗಳಲ್ಲಿ ಶಠಗೋಪವೇ ಇರುವುದಿಲ್ಲ. ತಿರುಪತಿ ಮೊದಲಾದ ಕೆಲವು ದೊಡ್ಡ ಆಲಯಗಳಲ್ಲಿ ಮಾತ್ರವೇ ಶಠಗೋಪ ಇರುವುದು, ಉಪಯೋಗಿಸುವುದು ನಡೆಯುತ್ತಿದೆ. ಅಷ್ಟಕ್ಕೂ ಈ ಶಠಗೋಪವೆಂದರೆ ಏನೆಂಬುದನ್ನು ಸ್ವಲ್ಪ ವಿವರಿಸಿಕೊಳ್ಳೋಣ. ಒಂದು ವಸ್ತುವನ್ನು ಕಾಣಿಸದಂತೆ ಮುಚ್ಚಿಟ್ಟುಕೊಳ್ಳುವುದನ್ನು (ಗೋಪ್ಯವಾಗಿ ಇಡುವುದು) ಎನ್ನುತ್ತೇವೆ. ಇರುವುದನ್ನು ರಹಸ್ಯವಾಗಿ ಹೊರಗಡೆ ಕಾಣಿಸದಂತೆ ಮಾಡುವುದನ್ನು ಗೋಪ್ಯವಾಗಿ ಇಡುವುದೇ

ಆಗುತ್ತದೆ. ರಹಸ್ಯವಾಗಿ ಇಡುವುದು ಒಂದು ವಸ್ತುವಾಗಿರಬಹುದು ಅಥವಾ ಒಂದು ವಿಷಯವಾಗಿರಬಹುದು. ಕೆಲವರು ತನ್ನಲ್ಲಿರುವ ವಿಷಯವನ್ನು ಯಾರಿಗೂ ತಿಳಿಯದಂತೆ ಬಹುಗೋಪ್ಯವಾಗಿ ಇಡಬಲ್ಲರು. ಗೋಪ್ಯವೆಂಬ ಪದ ಅದರ ಅರ್ಥ ಈಗಲೂ ಇದ್ದರೂ ದೇವಾಲಯಗಳಲ್ಲಿ ಮಾತ್ರಗೋಪ್ಯ ಹೋಗಿ ಗೋಪವಾಗಿದೆ. ಪೂರ್ವದಲ್ಲಿ ಶಠಗೋಪ್ಯವೆಂಬ ಪದ ಶಠಗೋಪವಾಗಿದೆ.

ಕೆಲವು ಪ್ರಾಮುಖ್ಯವಾದ ದೇವಾಲಯಗಳಲ್ಲಿ ಶಠಗೋಪವನ್ನು ಭಕ್ತರಿಗೆ ತಲೆಯ ಮೇಲೆಯೇ ಇಟ್ಟುಕಳುಹಿಸಿಕೊಡುತ್ತಾರೆ. ಹಿರಿಯರು ಆಶೀರ್ವದಿಸಿದರೂ ಶಠಗೋಪವಿರಿಸಿದರು ತಲೆಯ ಮೇಲೆಯೇ ಏಕೆಂದರೆ ನಮ್ಮ ತಲೆಗಳಲ್ಲಿಯೇ ಗುಣಗಳು ಅವುಗಳಿಂದ ಬರುವ ಕರ್ಮ ಮೊದಲಾದವುಗಳೆಲ್ಲ ಇವೆ. ಆಲಯದಲ್ಲಿ ಪೂಜೆಯನಂತರ ಭಕ್ತನಿಗೆ ತಲೆಯ ಮೇಲೆಯೇ ಶಠಗೋಪ ಇಡುವುದರಲ್ಲಿ ಅಂತರಾರ್ಥವು ಏನೆಂದರೆ? ನಮ್ಮ ಶರೀರದಲ್ಲಿ ತಲೆಯ ಮೇಲ್ಭಾಗದೊಳಗೆ ಕರ್ಮಜನಿತ ಗುಣಗಳಿವೆ. ಆ ಗುಣಗಳು ಒಳ್ಳೆಯವು, ಕೆಟ್ಟವು ಎಂದು ಎರಡು ವಿಧಗಳಾಗಿ ವಿಭಜಿಸಲ್ಪಟ್ಟಿವೆ. ಅವುಗಳಲ್ಲಿ ಕೆಟ್ಟವು ಆರು ಗುಣಗಳ ಗುಂಪಾಗಿಯೂ, ಹಾಗೆಯೇ ಒಳ್ಳೆಯವು ಆರು ಗುಣಗಳ ಗುಂಪಾಗಿಯೂ ಇವೆ. ಅಂದರೆ ಒಳ್ಳೆಯ ಹಾಗೂ ಕೆಟ್ಟ ಗುಣಗಳು ಒಂದೊಂದು ಷಟ್ ವರ್ಗಗಳಾಗಿ ವಿಭಜಿಸಲ್ಪಟ್ಟಿವೆ. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಗಳೆಂಬ ಕೆಟ್ಟ ಗುಣಗಳು ಆರು. ಒಂದು ಷಟ್ ವರ್ಗವಾದರೆ. ದಾನ, ದಯೆ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮಗಳೆಂಬ ಒಳ್ಳೆಯ ಗುಣಗಳು ಆರು ಒಂದು ಷಟ್ ವರ್ಗವಾಗಿವೆ. ಷಟ್ ಎಂದರೆ ಆರು, ವರ್ಗವೆಂದರೆ ಗುಂಪು ಎಂದು ತಿಳಿಯಬೇಕು. ಕೆಟ್ಟ ಷಟ್ ವರ್ಗದಿಂದ ಪಾಪ, ಒಳ್ಳೆಯ ಷಟ್ ವರ್ಗದಿಂದ ಪುಣ್ಯ ಬರುವುದು ಸತ್ಯ. ಪರಮಾತ್ಮನೊಳಗೆ ಐಕ್ಯವಾಗಬೇಕೆಂದರೆ ಒಳ್ಳೆಯ, ಕೆಟ್ಟ ಕರ್ಮ ಫಲಗಳು ಎರಡೂ ಇಲ್ಲದಂತೆ ಹೋಗಬೇಕು. ಆದ್ದರಿಂದ ಗುಡಿಯೊಳಗೆ ಹೋದ ಭಕ್ತನಿಗೆ ಸಣ್ಣ ಟೋಪಿಯಂತಹ ಪರಿಕರವನ್ನು ತಲೆಯ ಮೇಲಿಟ್ಟು ಎರಡು ವಿಧಗಳಾದ ಕರ್ಮಗಳನ್ನು ನೀನು

ಇಲ್ಲದಂತೆ ಮಾಡಿಕೊಳ್ಳಬೇಕೆಂಬ ಸಂದೇಶ ಕೊಡುವಂತೆ ಷಟ್‌ಗೋಪ್ಯ ಎನ್ನುತ್ತಿದ್ದರು. ಪೂರ್ವದಲ್ಲಿ ಒಬ್ಬ ಭಕ್ತನ ತಲೆಗೆ ಸರಿಹೋಗುವಂತಹ ಅಗಲವಿರುವ ಪರಿಕರವನ್ನು ಎರಡು ಸಲ ತಾಕಿಸುತ್ತಿದ್ದರು. ಈ ಕಾಲದಲ್ಲಿ ಒಂದು ಸಲ ತಾಕಿಸುತ್ತಿದ್ದಾರೆ, ಒಂದು ಸಲ ತಾಕಿಸುವುದು ಅಶಾಸ್ತ್ರೀಯ ಕೆಲಸ. ಎರಡು ಸಲ ತಾಕಿಸುವುದರಲ್ಲಿ ಅರ್ಥ ಇದೆ. ಒಂದು ಸಲ ತಾಕಿಸಿದಾಗ ಷಟ್‌ಗೋಪ್ಯ ಎಂದು, ಎರಡನೆ ಸಲ ತಾಕಿಸಿ ಷಟ್‌ಗೋಪ್ಯ 7ಎನ್ನುತ್ತಿದ್ದರು. ಹಾಗೆ ಎರಡು ಸಲ ತಾಕಿಸಿ ಎರಡು ಸಲ ಷಟ್ ಗೋಪ್ಯ ಎನ್ನುವುದರಲ್ಲಿ ಅರ್ಥವೇನೆಂದರೆ! ಒಂದು ಸಲ ತಾಕಿಸಿದಾಗ ನಿನ್ನ ತಲೆಯೊಳಗೆ ಕೆಟ್ಟಗುಣಗಳ ಗುಂಪು ಆರು ಮೇಲ್ನೋಟಕ್ಕೆ ಕಾಣಿಸದಂತೆ ಹೋಗಬೇಕೆಂದು ಷಟ್‌ಗೋಪ್ಯ ಎನ್ನುತ್ತಿದ್ದರು. ಹಾಗೆಯೇ ಎರಡನೆಯ ಸಲ ತಾಕಿಸಿದಾಗ ನಿನ್ನ ತಲೆಯೊಳಗಿನ ಒಳ್ಳೆಯ ಗುಣಗಳ ಗುಂಪು ಸಹ ಗೋಪ್ಯವಾಗಿ ಇದ್ದು ಹೋಗಬೇಕೆಂಬ ಉದ್ದೇಶದಿಂದ ಎರಡನೆಯ ಸಲ ಷಟ್‌ಗೋಪ್ಯವೆನ್ನುತ್ತಿದ್ದರು. ಹಾಗೆ ಉಪಯೋಗಿಸುವ ಪರಿಕರವು ಇಂತಹುದಕ್ಕೆ ಉಪಯೋಗಿಸುತ್ತಿದ್ದೇವೆಂದು ಎಲ್ಲಾ ಕಾಲದಲ್ಲೂ ಗುರುತಿರುವಂತೆ ಅದಕ್ಕೆ ಷಟ್‌ಗೋಪ್ಯವೆಂದು ಹೆಸರಿಟ್ಟಿದ್ದಾರೆ. ಅದರ ಹೆಸರು ಹಾಗೆ ಸ್ವಲ್ಪ ಕಾಲಕ್ಕೆ ಶಠಗೋಪವಾಗಿ ಬದಲಾಗಿಹೋಗಿದೆ. ಕಾಲಕ್ರಮದಲ್ಲಿ ಶಠಗೋಪವೆಂಬ ಹೆಸರಿನಿಂದ ಈಗಲೂ ಕೆಲವು ದೇವಾಲಯಗಳಲ್ಲಿ ಇದೆ. ಶಠಗೋಪ್ಯವು ಶಠಗೋಪವಾಗಿ ಹೆಸರಿನಲ್ಲಿ ಬದಲಾವಣೆ ಉಂಟಾದ ಆಚಾರದಲ್ಲಿ ಎರಡು ಸಲ ತಲೆಯ ಮೇಲೆ ಇಡುವುದು ಹೋಗಿ ಒಂದು ಸಲವೇ ಇಡುವ ಆಚಾರ ಬಂದರೂ ಅರ್ಥ ಮಾತ್ರ ಪೂರ್ತಿ ಇಲ್ಲದಂತೆ ಹೋಗಿದೆ. ಹೀಗೆ ಇಂದೂಗಳ ಆಚಾರಗಳು ಎಷ್ಟೋ ನಾಶವಾಗಿ ಸ್ವಲ್ಪ ಹೆಸರಿಗೆ ಮಾತ್ರ ಉಳಿದಿವೆ. ಹಾಗೆ ಇರುವವುಗಳಿಗೆ ಪುನಃ ಜೀವ ತುಂಬಬೇಕೆಂದರೆ ಶಠಗೋಪಕ್ಕೆ ಷಟ್‌ಗೌಪ್ಯವೆಂಬ ಹೆಸರಿಟ್ಟು, ಒಂದು ಸಲ ತಲೆಯ ಮೇಲಿರಿಸುವುದು ಬಿಟ್ಟು ಎರಡು ಸಲ ತಲೆಯ ಮೇಲಿರಿಸಿ, ಎರಡು ಸಲ ತಲೆಯ ಮೇಲೆ ಇಟ್ಟಾಗಲೆಲ್ಲ ಗುಣಗಳ ಗುಂಪು ಹೋಗಬೇಕೆಂದುಕೊಳ್ಳಬೇಕು. ದೇವಾಲಯದ ಪೂಜೆಗಳಲ್ಲಿ ಅಂತರಾರ್ಥ ಭಕ್ತನು ದೇವರಲ್ಲಿ ಐಕ್ಯವಾಗುವುದಕ್ಕಾದರೆ, ಶಠಗೋಪವನ್ನು ತಲೆಯ ಮೇಲೆ

ಎರಡು ಸಲ ಇಡುವುದು ಒಳ್ಳೆಯ ಹಾಗೂ ಕೆಟ್ಟ ಎರಡು ತರಹದ ಗುಣಗಳು ಅಳಸಿ ಹೋದಾಗ ನೀನು ನನ್ನಲ್ಲಿ ಐಕ್ಯವಾಗುತ್ತೀಯೆಂಬ ಅರ್ಥ ದೇವರು ಭಕ್ತನಿಗೆ ತಿಳಿಸಿದಂತಾಗುತ್ತದೆ. ಎಷ್ಟೋ ಅರ್ಥದಿಂದ ನಮ್ಮ ಹಿರಿಯರು ಇಟ್ಟಿರುವ ಆಚಾರಗಳನ್ನು ಇಂದಿನ ಕಾಲದಲ್ಲಿ ಯಾರೂ ತಿಳಿದುಕೊಳ್ಳದೇ ಹೋಗುತ್ತಿರುವುದು ವಿಷಾದಕರವಾಗಿದೆ.

# 29. ಪ್ರದಕ್ಷಿಣೆಗಳು

ದೇವಾಲಯ ಪೂಜಾ ವಿಧಾನದಲ್ಲಿ ಪ್ರದಕ್ಷಿಣೆಗಳನ್ನು ಮಾಡುವುದು ಸಹ ಇದೆ. ಪೂರ್ವ ಕಾಲದಲ್ಲಿ ಐದು ಸುತ್ತು ಮಾತ್ರ ಪ್ರದಕ್ಷಿಣೆ ಹಾಕುತ್ತಿದ್ದರು. ಈ ಕಾಲದಲ್ಲಿ ಲೆಕ್ಕವಿಲ್ಲದಷ್ಟು ಮಾಡುವವರು ಇದ್ದಾರೆ. ಪ್ರಪಂಚವೆಲ್ಲ ಪರಮಾತ್ಮನ ಶಕ್ತಿ ಆವರಿಸಿಕೊಂಡಿದೆ. "ಮಯಾಧ್ಯಕ್ಷೇಣ ಪ್ರಕೃತಿ ಸೂಯತೇ ಸಚರಾಚರಂ" ಎನ್ನುವಂತೆ ಪ್ರಕೃತಿಗೆಲ್ಲಾ ಪರಮಾತ್ಮ ಅಧ್ಯಕ್ಷತೆವಹಿಸಿದೆ. ಪರಮಾತ್ಮನನ್ನು ಆಧಾರವಾಗಿ ಮಾಡಿಕೊಂಡು ಪ್ರಕೃತಿ ಇದೆ. ಪ್ರಪಂಚವೆಂಬ ಚಕ್ರವು ಪರಮಾತ್ಮನನ್ನು ಆಧಾರಮಾಡಿಕೊಂಡು ತಿರುಗುತ್ತಿದೆ. ಪ್ರಕೃತಿ ಐದು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಪ್ರಕೃತಿ ಐದು ಭಾಗಗಳಲ್ಲಿಯೇ ಸರ್ವ ಜೀವಿಗಳು ಸಿಲುಕಿಕೊಂಡು ಇವೆ. ಆದ್ದರಿಂದ ನೀನು ಅಚ್ಚಿನಂತಿದ್ದೇಯೇ, ನಾನು ಪ್ರಕೃತಿ ಚಕ್ರದಲ್ಲಿ ಸಿಲುಕಿಕೊಂಡು ತಿರುಗುತ್ತಿದ್ದೇನೆಂದು. ಆ ಪ್ರಕೃತಿಯ ಐದು ಭಾಗಗಳಿಂದ ನನ್ನನ್ನು ವಿಮುಕ್ತನನ್ನಾಗಿ ಮಾಡಬೇಕೆಂದು ಪ್ರದಕ್ಷಿಣೆಗಳನ್ನು ಹಾಕುವುದು ಪೂರ್ವದಲ್ಲಿ ಆಚಾರವಾಗಿ ಇದ್ದಿತು. ಪೂರ್ವದಲ್ಲಿ ಪ್ರತಿಮೆಯ ಮುಂದಿನಿಂದ ಹೊರಟು ಪ್ರತಿ ಸುತ್ತು ಚಕ್ರದಂತೆ ತಿರುಗಿ ಪ್ರಕೃತಿ ಚಕ್ರದಲ್ಲಿ ಮೊದಲನೆಯದಾದ ಆಕಾಶದಿಂದ ನನ್ನನ್ನು ವಿಮುಕ್ತನನ್ನಾಗಿ ಮಾಡಬೇಕೆಂದು ಪ್ರತಿಮೆಯ ಮುಂದೆ ಕೋರಿಕೊಳ್ಳುತ್ತಿದ್ದರು. ಹಾಗೆಯೇ ಎರಡನೆಯ ಪರ್ಯಾಯ ಸುತ್ತಿ ಬಂದು ಎರಡನೆಯ ಭಾಗವಾದ ಗಾಳಿಯಿಂದ ರಕ್ಷಿಸೆಂದು ಕೊರುತ್ತಿದ್ದರು ಮೂರನೆಯ

ಪರ್ಯಾಯ ಸುತ್ತಿ ಅಗ್ನಿಯಿಂದ ರಕ್ಷಿಸೆಂದು, ನಾಲ್ಕನೆಯ ಪರ್ಯಾಯ ತಿರುಗಿ ಬಂದು ನೀರಿನಿಂದ ರಕ್ಷಿಸೆಂದು ಐದನೆಯ ಸಲ ತಿರುಗಿ ಬಂದು ಭೂಮಿಯಿಂದ ರಕ್ಷಿಸೆಂದು ಕೋರುತ್ತಿದ್ದರು. ಪಂಚಭೂತಗಳಿಂದ ವಿಮುಕ್ತನನ್ನಾಗಿ ಮಾಡಿ ನಿನ್ನಲ್ಲಿ ಐಕ್ಯ ಮಾಡಿಕೊಳ್ಳಬೇಕೆಂದು ಕೋರುವುದೇ ಪಂಚ ಪ್ರದಕ್ಷಿಣೆಗಳೆಂದು ತಿಳಿಯಬೇಕು. ಈಗಿನ ಕಾಲದಲ್ಲಿ ಪ್ರತಿಮೆಯ ಸುತ್ತಲೂ ತಿರುಗುತ್ತಿದ್ದಾರೆ. ಆದರೆ ಎಷ್ಟು ಸುತ್ತುಗಳು ತಿರುಗಬೇಕು. ಏನು ಕೋರಬೇಕೆಂಬುದು ತಿಳಿಯದೇ ಒಂದು ಕಡೆ ಪ್ರಪಂಚ ವಿಷಯಗಳನ್ನು ಇತರರೊಂದಿಗೆ ಮಾತನಾಡುತ್ತಲೇ ಪ್ರದಕ್ಷಿಣೆಗಳನ್ನು ಹಾಕುತ್ತಿದ್ದಾರೆ. ಲೆಕ್ಕಕ್ಕಿಷ್ಟು ಮಾಡಬೇಕೆಂಬ ಭಾವನೆ ಹೊರತು ಏತಕ್ಕಾಗಿ ಮಾಡುತ್ತಿದ್ದೇವೆ ಎಂಬ ಆಲೋಚನೆಯೇ ಇಲ್ಲ. ಕೆಲವರು ಮೂರು ಸುತ್ತು ತಿರುಗಿ ಮುಗಿಸುತ್ತಿದ್ದಾರೆ. ಮತ್ತೆ ಕೆಲವರು ಐದಕ್ಕಿಂತಲೂ ಹೆಚ್ಚು ಸುತ್ತು ತಿರುಗುತ್ತಿದ್ದಾರೆ. ಐದಕ್ಕಿಂತಲೂ ಹೆಚ್ಚಿಗೆಯಾಗಲಿ, ಕಡಿಮೆಯಾಗಲಿ ಅರ್ಥಹೀನ. ಅರ್ಥದಿಂದ ಕೂಡಿರುವ ಪ್ರದಕ್ಷಿಣೆಗಳು ಐದು ಮಾತ್ರ ಮಾಡಬೇಕು. ತಿಳಿಯದವರಿಗೂ ಸಹ ಅರ್ಥ ಇದು ಎಂದು ತಿಳಿಸಿ ಆಚರಿಸುವಂತೆ ಮಾಡಿದ ಭಕ್ತಿ ಮಾರ್ಗ, ಆರಾಧನೆಯ ಪದ್ಧತಿ ಸಾಫಲ್ಯವಾಗಬಲ್ಲದು.

# 30. ಕರ್ಪೂರ ಹಾರತಿ

ಪೂರ್ವದಲ್ಲಿ ಭಕ್ತರು ದೇವಾಲಯದೊಳಗೆ ಹೋಗಿ ಗಂಟೆ ಹೊಡೆದು, ತೆಂಗಿನಕಾಯಿ ಹೊಡೆಸಿ, ಕೈಗಳನ್ನು ಜೋಡಿಸಿದ ನಂತರ ಕರ್ಪೂರ ಬೆಳಗಿಸಿ ದೇವರ ಮುಂದೆ ಇಡುತ್ತಿದ್ದರು. ಅದರ ಅರ್ಥ ಏನೆಂದರೆ! ಬಣ್ಣ, ರೂಪ, ಗುಣಗಳಿರುವ ನನ್ನನ್ನು ಜ್ಞಾನಾಗ್ನಿಯಿಂದ ಸುಟ್ಟು ನಿನ್ನೊಳಗೆ ಐಕ್ಯ ಮಾಡಿಕೊಳ್ಳಬೇಕೆಂದು ಅದರ ಬಾಹ್ಯಾರ್ಥವಾಗಿ ಬಣ್ಣ, ವಾಸನೆ, ಆಕಾರವಿರುವ ಕರ್ಪೂರಕ್ಕೆ ಬೆಂಕಿ ಹಚ್ಚಿ ದೇವರಿಗೆ ತೋರಿಸುತ್ತಿದ್ದರು. ನೋಡುತ್ತಿದ್ದಂತೆಯೇ ಅದು ಅಗ್ನಿಯಿಂದ ದಹಿಸಲ್ಪಟ್ಟು ಶೂನ್ಯದಲ್ಲಿ ಐಕ್ಯವಾಗುತ್ತಿದೆ. ಬಣ್ಣ, ವಾಸನೆ,



(ಕರ್ಪೂರ ಹಾರತಿ)

ಆಕಾರವಿರುವ ಕರ್ಪೂರ ಶೂನ್ಯದಲ್ಲಿ ಬೆರೆತುಹೋದ ನಂತರ ಅದನ್ನು ಇಂತಹ ಕಡೆ ಇದೆಯೆಂದು ಹೇಳುವುದಕ್ಕೂ ಸಾಧ್ಯವಿಲ್ಲ ಹಾಗೆಯೇ ಇಲ್ಲದೆ ಹೋಗುತ್ತದೆ. ಜೀವಿಯೂ ಸಹ ತನ್ನೊಳಗಿರುವ ಕರ್ಮಗಳನ್ನು ಜ್ಞಾನಾಗ್ನಿಯಿಂದ ಸುಟ್ಟಂತಾದರೆ ಶೂನ್ಯದಲ್ಲಿ ಬೆರೆತು ಹೋಗುತ್ತದೆ. ನಂತರ ಆತನನ್ನು ಇಲ್ಲಿ ಇದ್ದಾನೆ, ಅಲ್ಲಿ ಇಲ್ಲವೆಂದು ಹೇಳುವುದಕ್ಕು ಸಮಯವಿಲ್ಲದಂತಾಗುತ್ತದೆ. ಕರ್ಪೂರ ಬೆಳಗಿಸಿ ತೋರಿಸುವುದರಲ್ಲಿಯೂ ಸಹ ಇಷ್ಟು ಅರ್ಥವಿದೆ ಎಂದು ತಿಳಿಯದವರು ಪೂಜೆ ಮುಗಿದ ಕೂಡಲೇ ಮಂಗಳಹಾರತಿ ಕೊಡಬೇಕೆಂದು ಕರ್ಪೂರ ಇಲ್ಲದಿದ್ದಲ್ಲಿ ಹತ್ತಿಯ ಬತ್ತಿಗಳನ್ನು ಬೆಳಗಿಸಿ ಹಾರತಿ ಬೆಳಗುತ್ತಾರೆ. ಅದು ಸರಿಯಾದ ಪದ್ಧತಿಯಲ್ಲ. ಜ್ಞಾನಿಗಳು ತಮ್ಮಲ್ಲಿರುವ ಭಾವನೆಯನ್ನು ಹೊರಗೆ ತೋರಿಸಲು ಶೂನ್ಯದೊಳಗೆ ಐಕ್ಯವಾಗುವ ಕರ್ಪೂರ ಬೆಳಗಿಸಿ ತೋರಿಸಿದ್ದಾರೆ. ನಾವು ಕರ್ಪೂರವಿಲ್ಲದಿದ್ದರೆ ಶೂನ್ಯದೊಳಗೆ ಐಕ್ಯವಾಗದ ಬತ್ತಿಗಳನ್ನು ಬೆಳಗಿಸಿದರೆ ಸರಿಯಾದ ಪದ್ಧತಿ ಹೇಗಾಗುತ್ತದೆ? ಆದ್ದರಿಂದ ಕರ್ಪೂರವಿಲ್ಲದಿದ್ದರೆ ನಮಸ್ಕಾರದಿಂದಲೇ ಪೂಜೆ ಮುಗಿಸಬಹುದು. ಪೂರ್ವದಲ್ಲಿ ಪೂಜೆಗಳು ಎಲ್ಲಾ ವಿಷಯಗಳನ್ನು ತಿಳಿದುಕೊಂಡು ಮಾಡುತ್ತಿದ್ದರು. ಅದರಿಂದ ಸಾರ್ಥಕವನ್ನು ಪಡೆಯುತ್ತಿದ್ದರು. ಈ ಕಾಲದಲ್ಲಿ ಏನು ತಿಳಿಯದಿದ್ದರೂ, ತಿಳಿದವರು ಹೇಳಿದ ಮಾತುಗಳನ್ನು ಕೆಲಸಕ್ಕೆ ಬಾರದವುಗಳೆಂದು ಭಾವಿಸಿ ಕಿವಿಕೊಡದವರಾಗಿದ್ದಾರೆ.

ಪೂರ್ವದಲ್ಲಿ ಅಗ್ನಿಯಿಂದ ದಹಿಸಲ್ಪಡುವ ಕರ್ಪೂರವನ್ನು ಮೌನವಾಗಿ ನೋಡುತ್ತ ಇರುತ್ತಿದ್ದರು. ನಾವು ಈ ವಿಧವಾಗಿ ಜ್ಞಾನವೆಂಬ ಅಗ್ನಿಯಿಂದ ಕರ್ಮ ದಹಿಸಲ್ಪಟ್ಟು ಅಣುಅಣುವಿನಲ್ಲಿ ವ್ಯಾಪಿಸಿ ಹೋಗಬೇಕೆಂಬ ಭಾವನೆ ಯಿಂದಲೇ ಮಾಡುತ್ತಿದ್ದರು. ಶುಭಕರವಾದ ಭಾವನೆಯಿಂದ ಮಾಡುತ್ತಿದ್ದೇವೆ. ಆದ್ದರಿಂದ ಅದರ ಹೆಸರು ಮಂಗಳ ಹಾರತಿ ಎಂದು ಕರೆಯಲ್ಪಡುತ್ತಿದೆ. ಮಂಗಳಹಾರತಿಯ ಮೇಲೆ ಹಸ್ತಗಳನ್ನಿರಿಸಿ ನಮಸ್ಕರಿಸುವು ದನ್ನು ಕೆಲವರು ಮಾಡುತ್ತಿದ್ದಾರೆ. ಮತ್ತೆ ಕೆಲವರು ಎರಡು ಹಸ್ತಗಳನ್ನು ಇರಿಸಿ ಕಣ್ಣುಗಳಿಗೆ ಒತ್ತಿಕೊಳ್ಳುತ್ತಿದ್ದಾರೆ. ಮಂಗಳಹಾರತಿ ಸಮಯದಲ್ಲಿ ಗಂಟಾನಾದ ಮಾಡುವುದೂ ಸಹಇದೆ. ಪೂರ್ವಕಾಲದಲ್ಲಿ ಕಣ್ಣುಗಳಿಗೆ ಒತ್ತಿಕೊಳ್ಳುವುದಾಗಲಿ, ನಮಸ್ಕರಿಸುವು ದಾಗಲಿ, ಗಂಟಾನಾದ ಮಾಡುವುದಾಗಲಿ ಮಾಡುತ್ತಿರಲಿಲ್ಲ.

ಮಂಗಳಹಾರತಿ ದೂರವಾಗಿದ್ದರೆ ನಿಶ್ಶಬ್ಧವಾಗಿ ಮೌನದಿಂದ ವೀಕ್ಷಿ ಸುತ್ತಿದ್ದರು. ಸಮೀಪದಲ್ಲಿರುವಾಗ ಉರಿಯುತ್ತಿರುವ ಹಾರತಿಯ ಮೇಲೆ ಒಂದು ಹಸ್ತವನ್ನು ಇರಿಸುತ್ತಿದ್ದರು. ಪೂರ್ವದಲ್ಲಿ ಆತ್ಮಜ್ಞಾನ ತಿಳಿದವರು ನಾನೂ ಸಹ ಈ ಹಾರತಿಯ ಕರ್ಪೂರದ ಹಾಗೆ ಶೂನ್ಯದಲ್ಲಿ ಬೆರೆತು ಹೋಗುತ್ತೇನೆಂದು ದೇವಾಲಯದ ಮಂಗಳಹಾರತಿಯ ಮೇಲೆ ಹಸ್ತವಿರಿಸಿ ಶಪಥ ಮಾಡುತ್ತಿದ್ದರು. ಶಪಥ ಮಾಡಿದ ನಂತರ ಹಾಗೆಯೇ ಪ್ರವರ್ತಿಸುತ್ತಿದ್ದರು. ಪೂರ್ವದ ಭಾವನೆ ಉಂಟಾಗಿ ಹಸ್ತವಿರಿಸುತ್ತಿದ್ದವರನ್ನು ನೋಡಿ ಭಾವನೆ ತಿಳಿಯದವರು ಏನೋ ಲಾಭವಿದೆ ಎಂಬ ಭಾವನೆಯಿಂದ ಹಾರತಿಯ ಮೇಲೆ ಕರಗಳನ್ನಿರಿಸುತ್ತಿದ್ದಾರೆ ಒಂದು ಹಸ್ತವಿರಿಸಬೇಕೆಂಬುದನ್ನು ತಿಳಿಯದೇ ಎರಡು ಹಸ್ತಗಳನ್ನು ತೋರಿಸಿ ಕಣ್ಣುಗಳಿಗೆ ಒತ್ತಿ ಕೊಳ್ಳುತ್ತಿದ್ದಾರೆ. ಈಗಿನ ಮಾನವರಿಗೆ ಅಂದಿನವರು ಶಪಥ ಮಾಡುವುದಕ್ಕಾಗಿಯೇ ಕರ್ಪೂರ ಹಾರತಿಯ ಮೇಲೆ ಕೈಯನ್ನು ಇರಿಸಿದ್ದಾರೆಂಬ ವಿಷಯ ತಿಳಿಯದೇ ಹೋಗಿದೆ. ಈಗಲಾದರೂ ಹಾರತಿಯನ್ನು ಬತ್ತಿಗಳಿಂದ ಮಾಡದೇ ಭಾವನೆಗೆ ಸರಿಹೊಂದುವ ಶೂನ್ಯದೊಳಗೆ ಬೆರೆತುಹೋಗುವ ಕರ್ಪೂರವನ್ನೇ ಬೆಳಗಿಸಬೇಕೆಂದು ಕೋರುತ್ತಿದ್ದೇವೆ. ಕರ್ಪೂರವನ್ನು ಬೆಳಗಿ

ಸುವುದೇ ಅಲ್ಲದೆ ಅದರ ಮೇಲೆ ನಿಮ್ಮ ಬಲಗೈಯನ್ನಿಟ್ಟು ನಾನು ಈ ವಿಧವಾಗಿ ಜ್ಞಾನಾಗ್ನಿಯಿಂದ ದಹಿಸಲ್ಪಟ್ಟು ಕರ್ಪೂರದಂತೆ ಶೂನ್ಯದಲ್ಲಿರುವ ಪರಮಾತ್ಮ ನೊಳಗೆ ಐಕ್ಯವಾಗುತ್ತೇನೆಂದು ಶಪಥ ಮಾಡಬೇಕು.

# 31. ಗೋವಿಂದ

ನಾಮವಿರುವ ದೇವಾಲಯಗಳಲ್ಲಿ ಗೋವಿಂದ ಎಂದು ಜೋರಾಗಿ ಅರಚುವುದನ್ನು ಕೇಳುತ್ತಲೇ ಇರುತ್ತೇವೆ. ಪ್ರತ್ಯೇಕವಾಗಿ ತಿರುಪತಿಯಲ್ಲಿ ಗೋವಿಂದ ಎನ್ನುವುದು ಹೆಚ್ಚಾಗಿದೆ. ಉಳಿದ ದೇವಾಲಯಗಳಲ್ಲಿಯೂ ಸಹ ಭಜನೆ ಮಾಡುವ ಸ್ಥಳಗಳಲ್ಲಿ ಭಜನೆಯ ಹಾಡು ಮುಗಿದೊಡನೆಯೇ ಅಂತಿಮವಾಗಿ ಗೋವಿಂದ ಎನ್ನುವುದು ನಡೆಯುತ್ತಿದೆ. ಹಾಗೆಯೇ ಒಬ್ಬ ಮನುಷ್ಯನು ಸತ್ತು ಹೋದಾಗ ಗೋವಿಂದ ಎಂದು ಶವಗಳನ್ನು ಹೊತ್ತುಕೊಂಡು ಹೋಗುವಾಗ ನುಡಿಯುತ್ತಿರು ತ್ತಾರೆ. ಮತ್ತು ಒಬ್ಬ ಮನುಷ್ಯ ಜೂಜಿನಲ್ಲಿ ಹಣ ಕಳೆದುಕೊಂಡು ಖಾಲಿ ಕೈಗಳಾದಾಗಲೂ ಸಹ ಇವನ ಕೆಲಸ ಗೋವಿಂದ ಎಂದು ಹೇಳುವುದು ನಡೆಯುತ್ತಿದೆ. ಭಜನೆಯ ಅಂತ್ಯದಲ್ಲಿ, ಜೀವನದ ಅಂತ್ಯದಲ್ಲಿ, ದಿವಾಳಿಯಾದ ಸಮಯದಲ್ಲಿ ಗೋವಿಂದ ಎನ್ನುವುದು ಅಂತ್ಯ ಸ್ಥಿತಿಯನ್ನು ತಿಳಿಯಪಡಿಸುತ್ತದೆ. ಗೋವಿಂದ ಎಂದರೆ ಆಗಿ ಹೋಗಿದೆ ಎಂದು ಅರ್ಥ. ಹಾಡು ಮುಗಿದು ಹೋದಾಗ, ಜೀವನ ಮುಗಿದು ಹೋದಾಗ, ಧನ ಮುಗಿದುಹೋದಾಗ ಗೋವಿಂದ ಎಂಬ ಪದವನ್ನು ಹಿಂದೆ ಬಳಸುತ್ತಿದ್ದರು. ಇಂದಿಗೂ ಹಾಗೆಯೇ ಅನ್ನುತ್ತಿದ್ದೇವೆ. ದೇವಾಲಯದೊಳಗೆ ಹೋಗಿಯು ಸಹ ಗೋವಿಂದ ಎನ್ನುವುದು ಇಂದಿಗೂ ಇದೆ. ಆದರೂ ಗೋವಿಂದ ಎನ್ನುವ ಪದ ದೇವರ ಹೆಸರೆಂದು ಕೊಂಡಿದ್ದೇವೆ. ಆದರೆ ಅದು ದೇವರ ಹೆಸರು ಅಲ್ಲವೆಂದು ಆಗಿ ಹೋಗಿದೆ ಎಂದು ಅಂತ್ಯಸ್ಥಿತಿಯನ್ನು ತಿಳಿಸುವ ಗುರುತೆಂದು ತಿಳಿದಿಲ್ಲ. ಪೂರ್ವದಲ್ಲಿ ದೇವಾಲಯದಲ್ಲಿ ಪ್ರವೇಶಿಸಿದವರು ಪೂಜಾ ವಿಧಾನವೆಲ್ಲ ಮುಗಿದುಹೋದ

ನಂತರ ಗೋವಿಂದ ಎಂದು ಹೇಳುತ್ತಿದ್ದರು. ಪೂರ್ವದಲ್ಲಿನ ಜ್ಞಾನಿಗಳು ನನ್ನ ಕರ್ಮವನ್ನೆಲ್ಲ ನಶಿಸುವಂತೆ ಮಾಡಿ ಏನೂ ಇಲ್ಲದೆ ಮುಗಿದು ಹೋಗಿರುವ ಸ್ಥಿತಿಯನ್ನು ಉಂಟುಮಾಡು ಎಂಬ ಭಾವನೆಯಿಂದ ಗೋವಿಂದ ಎನ್ನುತ್ತಿದ್ದರು. ಗೋವಿಂದ ಎಂಬ ಪದದ ಒಂದು ಅರ್ಥ ಪ್ರಪಂಚದಲ್ಲಿ ಎಲ್ಲ ಮುಗಿದು ಹೋಗಿರುವ ಸ್ಥಿತಿ ಎಂದು ತಿಳಿಯಬೇಕು. ಗೋವಿಂದಾ ಗೋವಿಂದ ಎನ್ನುವುದು ಹೇಳುವುದು ಪ್ರಪಂಚದಲ್ಲಿ ಕರ್ಮವನ್ನೆಲ್ಲ ಮುಗಿಸಿ ಮೋಕ್ಷವನ್ನುಂಟು ಮಾಡೆನ್ನುವುದೇ ಎಂದು ತಿಳಿಯಬೇಕು. ಗೋವಿಂದ ಎಂಬ ಪದ ಯಾವ ದೇವರ ಹೆಸರು ಅಲ್ಲವೆಂದು ಜ್ಞಾಪಕವಿಟ್ಟುಕೊಳ್ಳಬೇಕು. ಇನ್ನೂ ಹೇಗಿದೆ ಎಂದರೆ !

ಎಲ್ಲಿಯಾದರೂ ಗೋವಿಂದ ಎಂಬ ಪದವು ಎರಡು ಸಲ ಉಚ್ಚರಿಸುವುದೇ ನಡೆಯುತ್ತಿದೆ. ಈ ಪದವನ್ನು ಎರಡು ಸಲ ಉಚ್ಚರಿಸುವುದರಲ್ಲೂ ಸಹ ಪದ ಪದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಮೊದಲು ಉಚ್ಚರಿಸುವ ಪದ ಗೋವಿಂದಾ..... ಎಂಬ ದೀರ್ಘವಿರುತ್ತದೆ. ಎರಡನೆಯ ಸಲ ಉಚ್ಚರಿಸುವ ಪದದಲ್ಲಿ ಗೋ.....ವಿಂದ ಎಂಬ ದೀರ್ಘವಿರುತ್ತದೆ. ವಾಸ್ತವವಾಗಿ ಗೋವಿಂದ ಎಂಬ ಪದದಲ್ಲಿ ಒಂದೇ ಅರ್ಥವಿದ್ದರೂ ಎರಡು ಸಲ ಉಚ್ಚರಿಸುವುದು ಏತಕ್ಕಾಗಿ? ಎನ್ನುವುದು ಪ್ರಶ್ನೆ. ಅಷ್ಟೇ ಅಲ್ಲದೆ ಮೊದಲನೆಯ ಗೋವಿಂದ..... ದಲ್ಲಿ ದಾ ಅನ್ನು ಹೆಚ್ಚಾಗಿ ದೀರ್ಘ ಎಳೆಯುವುದು, ಎರಡನೆಯ ಸಲ ಹೇಳುವ ಗೋ.....ವಿಂದದಲ್ಲಿ ಗೋ ಎಂಬ ಅಕ್ಷರವನ್ನು ದೀರ್ಘ ಎಳೆಯುವುದರಲ್ಲಿಯೂ ಸಹ ವಿಶೇಷವೇನೋ ಇರುತ್ತದೆ. ಅದು ಏನೆಂಬುದು ಸಹ ಪ್ರಶ್ನೆಯೇ ಇವುಗಳ ಉತ್ತರಕ್ಕಾಗಿ ಹುಡುಕಿದರೆ ಕೃತಯುಗದಲ್ಲಿ ಈ ಪದವಿದ್ದಂತೆ ಆ ಕಾಲದಲ್ಲಿಯೇ ಮಹರ್ಷಿಗಳು ಸಹಿತ ಗೋವಿಂದ ಪದವನ್ನು ಉಚ್ಚರಿಸಿದಂತೆ ಚರಿತ್ರೆಯಲ್ಲಿ ತಿಳಿದು ಬರುತ್ತಿದೆ. ಆ ದಿನವೇ ತಿಳಿದಂತಹ ದೊಡ್ಡವರು ಗೋವಿಂದ ಎಂಬ ಪದಕ್ಕೆ ಅರ್ಥವನ್ನು ಹೇಳಿ ಆ ಅರ್ಥದ ಪ್ರಕಾರವೇ ಎರಡು ಸಲ ಗೋವಿಂದ ಪದವನ್ನು ಉಚ್ಚರಿಸುವಂತೆ, ಅದರಲ್ಲೂ ಒಂದಕ್ಕೊಂದು ಸ್ವಲ್ಪ ವ್ಯತ್ಯಾಸವಿರುವಂತೆ

ತೋರಿಸಿದ್ದಾರೆ. ಅಂದು ಅವರು ಏನು ಮಾಡಿದರೂ ಭವಿಷ್ಯತ್ತಿನಲ್ಲಿ ಮಾನವ ಕುಲಕ್ಕೆ ಜ್ಞಾನ ಉಂಟಾಗುವಂತೆ ಯೋಚಿಸಿ ಮಾಡುತ್ತಿದ್ದರು. ಶಾಶ್ವತವಾಗಿ ಜ್ಞಾನವನ್ನು ಪ್ರಬೋಧನೆ ಮಾಡುತ್ತಿದ್ದ ಅಂದಿನ ಅವರ ಉದ್ದೇಶವೇನೆಂಬುದನ್ನು ಅಲ್ಲಿಗೇ ಹೋಗಿ ಅವರನ್ನೇ ಕೇಳಿ ತಿಳಿದುಕೊಳ್ಳೋಣ.

'ಗೋವಿಂದ' ಎಂಬ ಪದದಲ್ಲಿ ಅರ್ಥವಿನ್ನು ಇಲ್ಲ ಎಂಬುದಾಗಿಯೂ ಅಥವಾ ಎಲ್ಲಾ ಮುಗಿದು ಹೋಗಿದೆ ಎಂಬುದಾಗಿಯೂ ಅರ್ಥವನ್ನು ಹೇಳಿದ್ದಾರೆ. ತಿಳಿದವರಾಗಲಿ, ತಿಳಿಯದವರಾಗಲಿ ಶವವನ್ನು ತೆಗೆದುಕೊಂಡು ಹೋಗುವಾಗ ಅದೇ ಅರ್ಥದಿಂದ ಹೇಳುತ್ತಿದ್ದಾರೆ. ತಿಳಿಯದವರು ಅನ್ನಬೇಕೆಂದು ಪದ್ಧತಿಯಂತೆ ಹೇಳಿದರೂ ಸಂದರ್ಭ ಅದೇ ಎಂದು ಯೋಚನೆ ಮಾಡುವವರಿಗೆಲ್ಲಾ ತಿಳಿಯಬಲ್ಲದು. ಹಾಗೆಯೇ ಜೂಜಿನಲ್ಲಿ ಇದ್ದುದೆಲ್ಲ ಕಳೆದುಕೊಂಡಾಗಲೂ ಸಹ ಈ ಗೋವಿಂದ ಪದವನ್ನೇ ಬಳಸುತ್ತಿದ್ದಾರೆ. ಅಲ್ಲಿಯೂ ಸಹ ಮುಗಿದು ಹೋಗಿದೆ ಎಂಬ ಸಂದರ್ಭವೇ ಇದೆ. ಈಗ ಯಾರು ಎಷ್ಟು ಸಂದರ್ಭಗಳಲ್ಲಿ ಬಳಸಿದರೂ ಪೂರ್ವಿಕರು ದೇವರ ಹತ್ತಿರ ಮಾತ್ರ ಗೋವಿಂದ ಎನ್ನುತ್ತಿದ್ದರು. ಅಂದು ದೇವರ ಸನ್ನಿಧಿಯಲ್ಲಿ ಅಂದರೆ ದೇವಾಲಯದಲ್ಲಿ ಪ್ರತಿಮೆಯ ಮುಂದೆ ನನಗೆ ಈ ಜಗತ್ತಿನಲ್ಲಿ ಬೇಕಾದವುಗಳು ಯಾವುವು ಇಲ್ಲ ಎಂಬ ಅರ್ಥದಿಂದ ಗೋವಿಂದಾ.....ಎಂದೂ ಹಾಗೆ ಶರೀರದೊಳಗೆ ಅಂಟಿಕೊಂಡಿರುವ ಕರ್ಮವು ಏನೂ ಇಲ್ಲವೆಂದು ಅರ್ಥ ಬರುವಂತೆ ಗೋ.....ವಿಂದಾ ಎನ್ನುತ್ತಿದ್ದರು. ಅಂದರೆ ಬಾಹ್ಯವಾಗಿರುವ ಅವುಗಳ ಮೇಲೆ ಆಸೆ ಮೊದಲಾದ ಯಾವ ಗುಣಗಳ ಕೆಲಸವೂ ಇಲ್ಲವೆಂದು, ಹಾಗೆಯೇ ಶರೀರಾಂತರದಲ್ಲಿ ಅಂಟುತ್ತಿರುವ ಕರ್ಮ ಯಾವುದು ಇಲ್ಲವೆಂದು ಎರಡು ಗೋವಿಂದಗಳು ಸ್ವಲ್ಪ ವ್ಯತ್ಯಾಸದಿಂದ ಇಟ್ಟಿದ್ದಾರೆ. ಇನ್ನೂ ಅರ್ಥಬೇಕೆಂದರೆ ಹೊರಗಿನ ಸಂಬಂಧವಿಲ್ಲದೆ ಬ್ರಹ್ಮಯೋಗ, ಒಳಗಿನ ಸಂಬಂಧವಿಲ್ಲದೇ ಕರ್ಮಯೋಗವನ್ನು ಹೊಂದಿದ್ದೇನೆಂಬ ಅರ್ಥದಿಂದ ಬಾಹ್ಯವಾಗಿ ಒಂದು ಗೋವಿಂದ, ಅಂತರವಾಗಿ ಒಂದು ಗೋವಿಂದ ಎನ್ನುತ್ತಿದ್ದರು.

ಎರಡೂ ಯೋಗಗಳೇ ಆಗಿದ್ದರೂ ಅವುಗಳಲ್ಲಿ ಸ್ವಲ್ಪವ್ಯತ್ಯಾಸ ಇರುವುದರಿಂದ ಗೋವಿಂದ ಎಂಬ ಮಾತಿನಲ್ಲಿಯೂ ಸಹ ಸ್ವಲ್ಪ ವ್ಯತ್ಯಾಸ ತೋರಸಬೇಕೆಂದು ಅಂದಿನ ಹಿರಿಯರೇ ಹೇಳಿದ್ದಾರೆ. ಎರಡು ಪದ್ಧತಿಗಳು ಕರ್ಮ ಇನ್ನು ಇಲ್ಲವೆಂದು ತಿಳಿಸುವವುಗಳೇ ಆದರೂ ಅವು ಬೇರೆ ಬೇರೆ ಎಂದು ತಿಳಿಯುವಂತೆ ಒಂದಕ್ಕೆ ಪ್ರಾರಂಭದಲ್ಲಿಯೇ ದೀರ್ಘ ಮತ್ತೊಂದಕ್ಕೆ ಕೊನೆಯಲ್ಲಿ ದೀರ್ಘವನ್ನು ಇಟ್ಟಿದ್ದಾರೆ. ಎರಡು ಬಾರಿ ಉಚ್ಚರಿಸುವುದರಲ್ಲಿ ಅದೂ ಸ್ವಲ್ಪ ವ್ಯತ್ಯಾಸದಿಂದ ಹೇಳುವುದು ಎಲ್ಲರಿಗೂ ತಿಳಿದ ವಿಷಯವಾಗಿ ಆದಿನದಲ್ಲಿ ಇದ್ದಿತು. ಈ ಕಾಲದಲ್ಲಿ ಅದು ಅರ್ಥಹೀನವಾಗಿ ಹೋಗಿದೆ, ಅನ್ನುವವರಿಗೆ ಅದರ ವಿಷಯ ಪೂರ್ತಿ ತಿಳಿಯದೇ ಹೋಗುವುದರಿಂದ ಅದರೊಳಗಿನ ಜ್ಞಾನ ಸಂದೇಶ ಪ್ರಬೋಧಿತವಾಗದೇ ಹೋಗಿದೆ. ಆ ದಿನ ಇಂದೂ ಧರ್ಮಗಳಲ್ಲಿ ಮುಖ್ಯವಾದ ಧರ್ಮವಾಗಿದ್ದ ಗೋವಿಂದಾ ಈ ದಿನ ಅದರ ಬೆಲೆಯನ್ನು ಕಳೆದುಕೊಂಡಿದೆ. ಅರ್ಥವಿಲ್ಲದಿದ್ದರೂ ಆಚರಣೆಯ ರೂಪದಲ್ಲಿ ಗೋವಿಂದ ಉಳಿದಿದ್ದರೂ ಗುರುವಿನ ಬಳಿ ಸರ್ವವನ್ನು ತಿಳಿದುಕೊಂಡಿದ್ದೇವೆನ್ನುವವರಿಗೆ, ನಮ್ಮ ಗುರುವು ದೊಡ್ಡವನೆಂದು ಹೇಳಿಕೊಳ್ಳುವವರಿಗೆ, ಅನೇಕ ವರ್ಷಗಳು ಗುರು ತಿಳಿಸಿದ ವಿಷಯಗಳೆಲ್ಲವೂ ಜೀರ್ಣಸಿಕೊಂಡಿದ್ದೇವೆ ಎನ್ನುವವರಿಗೆ, ಗೋವಿಂದ ಎಂಬ ಪದವನ್ನು ಎರಡು ಬಾರಿ ಹೇಳುವುದಾಗಲಿ, ನುಡಿಯುವುದರಲ್ಲಿ ಅವುಗಳ ವ್ಯತ್ಯಾಸ ತಿಳಿಯದೇ ಹೋಗಿದೆ ಹೊರತು ನೋಡಿದರೆ ನೀವಿನ್ನು ಸಂಪೂರ್ಣ ಜ್ಞಾನಿಗಳೇ ಆಗಿಲ್ಲವೆಂಬುದು ಚುರುಕು ಮುಟ್ಟಿಸಿದಂತಾಗಿದೆ. ಪೂರ್ತಿ ಜ್ಞಾನದ ಒಂದು ಆಚರಣೆ ಇಲ್ಲದೆ ಹೋಗಿದ್ದರೂ ಕನಿಷ್ಠ ಪೂರ್ತಿಯಾಗಿ ಜ್ಞಾನವನ್ನಾದರೂ ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇವೆ. ಅರ್ಥದಲ್ಲಿ ಒಂದು ಸಲ ಗೋವಿಂದಾ ಗೋವಿಂದ ಎನ್ನುವುದು ಒಳ್ಳೆಯದು.

# 32. ಕಲ್ಯಾಣಿ

ದೇವಾಲಯಗಳನ್ನು ಸಾಧ್ಯವಾದಷ್ಟು ನದಿ ದಡದ ಮೇಲೆ ನಿರ್ಮಿಸುತ್ತಿದ್ದರು. ಕೆಲವು ದೇವಾಲಯಗಳಿಗೆ ನದಿಗಳು ಸಮೀಪದಲ್ಲಿ ಇಲ್ಲದಿರುವುದರಿಂದ ಆಲಯದ ಸಮೀಪದಲ್ಲಿ ಕಲ್ಯಾಣಿ ನಿರ್ಮಿಸುತ್ತಿದ್ದರು. ಒಟ್ಟಿನಲ್ಲಿ ದೇವಾಲಯಗಳು ನದಿಯ ಸಮೀಪದಲ್ಲಾಗಲೀ, ಕಲ್ಯಾಣಿಯ ಸಮೀಪದಲ್ಲಾಗಲೀ ಇರುತ್ತಿದ್ದವು. ವರ್ಷಕ್ಕೊಂದು ಬಾರಿ ನಡೆಯುವ ಜಾತ್ರೆಯ (ತಿರುನಾಮ) ಸಮಯದಲ್ಲಿ ಸಣ್ಣ ದೋಣಿಯಂತದ್ದನ್ನು ತಯಾರು ಮಾಡಿ ನದಿಯಲ್ಲಾಗಲಿ, ಕಲ್ಯಾಣಿಯಲ್ಲಾಗಲಿ ಆ ದೋಣಿಯ ಮೇಲೆ ಆಯಾ ದೇವರನ್ನು ಕೂರಿಸಿ ದಾಟಿಸುತ್ತಿದ್ದರು. ಅದನ್ನೇ ತೆಪ್ಪೋತ್ಸವ ಎಂದು ಕರೆಯುತ್ತಿದ್ದರು. ದೇವಾಲಯಗಳು ಅವುಗಳಲ್ಲಿನ ಪೂಜೆಗಳು ಪರಮಾರ್ಥದಿಂದ ಭಾವಿಸಿಕೊಂಡು ಮಾಡುತ್ತಿದ್ದರು. ಆದ್ದರಿಂದ ತೆಪ್ಪೋತ್ಸವದಲ್ಲಿನ ಪರಮಾರ್ಥವನ್ನು ಸಹ ನಾವು ತಿಳಿದುಕೊಳ್ಳಬೇಕು. ತೆಪ್ಪೋತ್ಸವಗಳು ಲಿಂಗಕ್ಕೆ ಮಾಡಬಾರದು. ರೂಪವಿರುವ ದೇವರುಗಳಿಗೇ ಮಾಡಬೇಕು. ಏತಕ್ಕೆಂದರೆ ಪರಮಾತ್ಮನು ಭಗವಂತನಾಗಿ ಹುಟ್ಟಿದಾಗ ಗುಣಗಳಿಂದ ಅನೇಕ ಒಳ್ಳೆಯ, ಕೆಟ್ಟ ಕಾರ್ಯಗಳನ್ನು ಮಾಡುತ್ತಾ ಆ ಕಾರ್ಯಗಳಿಂದ ಸಂಭವಿಸಬಹುದಾದ ಪಾಪ ಪುಣ್ಯಗಳೆಂಬ ಕರ್ಮಗಳನ್ನು ಅಂಟದಂತೆ ಇರುವವನು ನಾನು ಈ ವಿಧವಾಗಿದ್ದೇನೆ. ನೀವೂ ಸಹ ಗತ ಜನ್ಮಗಳ ಕರ್ಮದಿಂದ ಸಂಭವಿಸುವ ಸರ್ವಕಾರ್ಯಗಳನ್ನು ಮಾಡುತ್ತಾ ನನ್ನ ಹಾಗೆಯೇ ಹೊಸ ಕರ್ಮ ಹೊಂದದಂತೆ ಇರಬೇಕೆಂದು ಗೀತೆಯಲ್ಲಿಯೂ ಸಹ ಭಗವಂತನು ಹೇಳಿದ್ದಾನೆ. ಆ ಸಂದೇಶವೇ ತೆಪ್ಪೋತ್ಸವದ ಒಂದು ಭಾವನೆ. ಕಲುಶ ಜಲದಿಯನ್ನು ಸಣ್ಣ ದೋಣಿಯಿಂದ ದಾಟಬಹುದು. ಹಾಗೆಯೇ ಕರ್ಮಗಳೆಂಬ ಸಮುದ್ರವನ್ನು ಜ್ಞಾನವೆಂಬ ಸಣ್ಣ ದೋಣಿಯಿಂದ ದಾಟಬಹುದೆಂಬ ವಿಷಯವನ್ನು ತೆಪ್ಪೋತ್ಸವದಲ್ಲಿ ತೋರಿಸಿದ್ದಾರೆ. ಗುಣಗಳುಳ್ಳವನೇ ಭಗವಂತ. ಆತನು ಗುಣಗಳಿಂದ ಸಂಭವಿಸುವ ಕರ್ಮವನ್ನು ತನ್ನ ಜ್ಞಾನದಿಂದ ದಾಟಿ ಹೋಗುತ್ತಿದ್ದಾನೆಂದು ತೋರಿಸುವುದೇ ತೆಪ್ಪ ಉತ್ಸವವೆಂದು ತಿಳಿಯಬೇಕು. ಹಾಗೆಯೇ ನಾವೂ ಸಹ ನಿಜ ಜೀವನದಲ್ಲಿ ಜ್ಞಾನದಿಂದ ಕರ್ಮವನ್ನು ದಾಟಬಲ್ಲೆವು

ಎಂಬ ಭಾವನೆಗೆ ಬಂದು, ಕರ್ಮವನ್ನು ಅಂಟದಂತೆ ಮಾಡುವ ಪರಿಕರವಾದ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ತೆಪ್ಪಉತ್ಸವ ಸಂಪ್ರದಾಯಕ್ಕೆ ಅರ್ಥ ಹೀಗಿರಲು ಕೆಲವು ದೇವಾಲಯಗಳಿಗೆ ನದಿಯಾಗಲಿ, ಕಲ್ಯಾಣಿಯಾಗಲಿ ಇರುವುದಿಲ್ಲ. ಕೆಲವು ದೇವಾಲಯಗಳಿಗೆ ನದಿ, ಕಲ್ಯಾಣಿಯಿದ್ದರೂ ತೆಪ್ಪ ಉತ್ಸವಗಳನ್ನು ನಡೆಸುತ್ತಿಲ್ಲ. ದೇವಾಲಯಗಳನ್ನು ನದಿಯಾಗಲಿ, ಕಲ್ಯಾಣಿಯಾಗಲಿ ಇಲ್ಲದಂತೆ ಕಟ್ಟುವುದು ಮತ್ತು ಇರುವ ದೇವಾಲಯಗಳಲ್ಲಿ ತೆಪ್ಪ ಉತ್ಸವ ನಡೆಸದೇ ಹೋಗುವುದು ಸಂಪ್ರದಾಯ ವಿರುದ್ಧವಾದುದು ಮತ್ತು ಅರ್ಥ ಹೀನವಾದುದು. ಎಲ್ಲಾ ಇದ್ದರೂ ತಿರುಪತಿ, ವಿಜಯವಾಡ ದೇವಸ್ಥಾನಗಳಲ್ಲಿ ತೆಪ್ಪ ಉತ್ಸವಗಳು ನಡೆಯುತ್ತಿದ್ದರೂ ಅವುಗಳ ಭಾವನೆಯನ್ನು ತಿಳಿದು ಕೊಳ್ಳಲಾರದೇ ಹೋಗುವುದು ವಿಡ್ದೂರ.

# 33. ಮೆರವಣಿಗೆ

ನಿತ್ಯವೂ ದೇವಾಲಯದಲ್ಲಿರುವ ದೇವರನ್ನು ವರ್ಷಕ್ಕೊಂದು ಬಾರಿ ಮೆರವಣಿಗೆ ಮಾಡುವುದು ನಡೆಯುತ್ತಿದೆ. ಊರಿನಲ್ಲಿರುವ ದೇವಾಲಯದೊಳಗೆ ಪ್ರಜೆಗಳಿಗೆಲ್ಲ ಹೋಗುವ ಅಭ್ಯಾಸ, ಅವಕಾಶವಿರುವುದಿಲ್ಲ. ಅಂತಹವರೆಲ್ಲ ದೇವರನ್ನು ತಿಳಿದುಕೊಳ್ಳುವ ಉದ್ದೇಶದಿಂದ ಆಲಯದ ದೇವರ ಪ್ರತಿಬಿಂಬವನ್ನು ಊರೊಳಗಿನ ಎಲ್ಲ ಬೀದಿಗಳಲ್ಲೂ ತಿರುಗಿಸಿ ಮೆರವಣಿಗೆ ಮಾಡುತ್ತಿದ್ದರು. ಊರೊಳಗಿನವರೆಲ್ಲ ತಿಳಿದುಕೊಳ್ಳುವ ಕಾರಣವಾಗಿ ಆಲಯದಲ್ಲಿನ ದೇವರನ್ನು ಬೀದಿಗಳೊಳಗೆ ತರುವುದನ್ನು ಹಿಂದಿನ ಕಾಲದಲ್ಲಿ ಮೆರವಣಿಗೆ ಎನ್ನುತ್ತಿದ್ದರು. ಮೆರವಣಿಗೆಯಲ್ಲಿ ಯಾವುದೋ ಒಂದು ಪ್ರತಿಮೆಯನ್ನು, ಯಾವುದೋ ಒಂದು ವಾಹನದ ಮೇಲೆ ಮೆರವಣಿಗೆ ಮಾಡುವುದು ನಡೆಯುತ್ತಿದೆ. ದೇವರನ್ನು ವಾಹನದ ಮೇಲೆ ಊರಲ್ಲಿ ಮೆರವಣಿಗೆ ಮಾಡುವುದರಲ್ಲಿ ದೇವರಿಗೆ ತಪ್ಪದೇ ವಾಹನವಿದೆ ಎಂಬ ಅರ್ಥ ಕೊಡುತ್ತಾ, ಆ ವಾಹನ ನಮ್ಮ ಶರೀರವೇ ಎಂದು

ತಿಳಿಸುತ್ತ ಮನುಷ್ಯನ ಶರೀರದ ಮೇಲೆ ಮತ್ತು ಇತರೆ ಪ್ರಾಣಿಗಳ ಶರೀರಗಳ ಮೇಲೆ ಹತ್ತಿದ ದೇವರನ್ನು ಮೆರವಣಿಗೆ ಮಾಡುವುದು ನಡೆಯುತ್ತಿದೆ. ಹಾಗೆ ಎಲ್ಲಾ ವಾಹನಗಳ ಮೇಲೂ ದೇವರನ್ನು ಮೆರವಣಿಗೆ ಮಾಡುವುದರಲ್ಲಿ ಅರ್ಥವೇನೆಂದರೆ ಎಲ್ಲಾ ಶರೀರಗಳನ್ನು ನಡೆಸುವಂತಹ ಸಾರಥಿಯಾಗಿ ದೇವರಿದ್ದಾನೆಂದು ತಿಳಿಯಪಡಿಸುವುದೇ ಎಂದು ತಿಳಿಯಬೇಕು. ಎಲ್ಲಾ ಶರೀರಗಳು ವಾಹನಗಳಾಗಿ ದೇವರಿಗಿವೆಯೆಂದು, ಅಷ್ಟೇ ಅಲ್ಲದೆ ಆ ಶರೀರಗಳೊಳಗಿನ ಆತ್ಮನಾಗಿರುವ ದೇವರನ್ನು ತಿಳಿದುಕೊಳ್ಳಲು ಪ್ರಯತ್ನಿಸಿದರೆ ಆ ದೇವರು ನಮಗೆ ಅಭಯವಾಗಿದ್ದು ನಮ್ಮ ಕರ್ಮಗಳನ್ನು ಖಂಡಿಸಿಕೊಳ್ಳು ವಂತಹ ಜ್ಞಾನಖಡ್ಗಗಳನ್ನು ಪ್ರಸಾದಿಸುತ್ತಾನೆಂಬ ಅರ್ಥದಿಂದಲೇ ಮೆರವಣಿಗೆ ಮಾಡುವ ದೇವರಿಗೆ ಆಯುಧಗಳಿಂದ ಅಲಂಕರಿಸಿರುತ್ತಾರೆ. ಎಲ್ಲರಲ್ಲಿಯೂ ದೇವರೊಬ್ಬನಿದ್ದಾನೆಂದು, ಅವನೇ ತನ್ನಲ್ಲಿನ ಆತ್ಮವೆಂದು, ಆ ಆತ್ಮವೇ ಶರೀರಗ ಳನ್ನು ನಡೆಸುತ್ತಿರುವುದಾಗಿ ಇದೆಯೆಂದು, ಎಲ್ಲ ಶರೀರಗಳು ಆ ಶರೀರದೊಳಗಿನ ಆತ್ಮನಿಗೆ ವಾಹನಗಳಾಗಿವೆಯೆಂದು, ದೇಹವೆಂಬ ರಥವನ್ನು ನಡೆಸುವವನು ದೇವರೆಂದು, ಅವನನ್ನು ತಿಳಿಯುವುದರಿಂದ ದೇವರ ಕೈಯ್ಯಲ್ಲಿನ ಜ್ಞಾನಾಯುಧ ಗಳು ನಮ್ಮ ಕರ್ಮಗಳನ್ನು ಸುಟ್ಟು ಹಾಕಬಲ್ಲವೆಂದು ತಿಳಿಸುವ ಉದ್ದೇಶವೇ ಪೂರ್ವದ ದೊಡ್ಡವರು ಮೆರವಣಿಗೆಯ ಕಾರ್ಯವನ್ನು ಇಟ್ಟಿದ್ದಾರೆ. ಈ ಮೆರವಣಿಗೆಯ ಮೂಲಕ ಊರೊಳಗಿನ ಹಿರಿಯರು, ಕಿರಿಯರು ಎಲ್ಲರಿಗೂ ದೇವರ ಮೇಲೆ ಭಕ್ತಿ ಮೂಡಿ ಆತನು ಊರಿಗೆ ಏನನ್ನು ತಿಳಿಸಲು ಬಂದಿದ್ದಾನೋ ಎಂದು ಅಲ್ಪ ಸ್ವಲ್ಪ ತಿಳಿದುಕೊಳ್ಳುತ್ತಿದ್ದರು. ಅಂದಿನ ಹಿರಿಯರು ಮೆರವಣಿಗೆಯ ಸಮಯದಲ್ಲಿ ಹಾಗೆ ಮಾಡುವುದರಲ್ಲಿ ತಮ್ಮ ಉದ್ದೇಶವೇನೆಂಬುದನ್ನು ಪ್ರಜೆಗಳಿಗೆ ತಿಳಿಯಪಡುಸುತ್ತಿದ್ದರು. ಈ ದಿನ ಸಹ ಮೆರವಣಿಗೆಗಳು ಇವೆ ಆದರೆ ಅವುಗಳ ಅರ್ಥಗಳು ಇಲ್ಲದಂತೆ ಹೋಗಿವೆ. ಈಗಲಾದರೂ ದೇವರ ವಾಹನವನ್ನು ಕುರಿತು, ದೇವರ ಆಯುಧಗಳನ್ನು ಕುರಿತು ಅರಿವನ್ನು ತಿಳಿದುಕೊಳ್ಳೋಣ.

# 34. ಜಾತ್ರೆ (ತಿರುನಾಮ)

ವರ್ಷಕ್ಕೊಂದು ಸಲ ಜಾತ್ರೆ ಎಂಬ ಹೆಸರಿನಲ್ಲಿ ಒಂದು ದೊಡ್ಡ ಉತ್ಸವವನ್ನು ಮಾಡುತ್ತಿದ್ದರು. ಅಂದಿನ ಜಾತ್ರೆ ಎಂಬ ಉತ್ಸವವು ಕಾಲಕ್ರಮದಲ್ಲಿ ಈ ದಿನ ಜಾತ್ರೆ ಎಂಬ ಹೆಸರಿನಲ್ಲಿಯೇ ಉಳಿದಿದೆ. ಜಾತ್ರೆ ಎಂದರೆ ದೇವರ ಉತ್ಸವ ವೀಕ್ಷಿಸಲು ಸಾವಿರಾರು ಜನ ಗುಂಪು ಸೇರುವುದು. ವೆಂಕಟೇಶ್ವರನ ನಾಮವು ಮೂರು ನಾಮಗಳಾಗಿ ಇದೆ! ಅದರಲ್ಲಿನ ಎರಡು ನಾಮಗಳು ಪಕ್ಕದಲ್ಲಿ ಬಿಳುಪಾಗಿಯೂ ಮಧ್ಯದಲ್ಲಿರುವುದು ಮಾತ್ರ ಕೆಂಪಾಗಿಯೂ ಪಕ್ಕದಲ್ಲಿನ ಎರಡು ನಾಮಗಳಿಗಿಂತಲೂ ಉದ್ಧವಾಗಿರುತ್ತದೆ. ಎರಡು ಬಿಳಿಯ ನಾಮಗಳಿಗಿಂತ ಬಣ್ಣದಲ್ಲಿ ಕೆಂಪಾಗಿ ಸೈಜಿನಲ್ಲಿ ಉದ್ಧವಾಗಿಯೂ ಮಧ್ಯದಲ್ಲಿರುವ ನಾಮ ಪ್ರತ್ಯೇಕತೆ ಉಂಟು ಮಾಡಿಕೊಂಡಿದೆ. ಈ ನಾಮವು ಭೌತಿಕವಾಗಿ ಮತ್ತು ಅಭೌತಿಕವಾಗಿ ಎರಡು ಅರ್ಥಗಳನ್ನು ಒಳಗೊಂಡಿದೆ. ಭೌತಿಕವಾಗಿ ಶರೀರದಲ್ಲಿರುವ ಮೂರುವರೆ ಲಕ್ಷ ನಾಡಿಗಳಲ್ಲಿ ಮುಖ್ಯವಾದವುಗಳಲ್ಲಿ ಅತಿ ಮುಖ್ಯವಾದವು ಮೂರು ಮಾತ್ರವೆ ಇವೆ. ಅವುಗಳನ್ನೇ ಇಡಾ, ಪಿಂಗಳ, ಸುಷುಮ್ನ ನಾಡಿಗಳೆಂದು ಅಥವಾ ಸೂರ್ಯ, ಚಂದ್ರ, ಬ್ರಹ್ಮನಾಡಿಗಳೆಂದು ಕರೆಯುವುದು ನಡೆಯುತ್ತಿದೆ. ಅವುಗಳನ್ನೇ ಮುಖದ ಮೇಲೆ ನಾಮವಾಗಿ ಗುರುತಿಸುವುದು ನಡೆಯುತ್ತಿದೆ. ಇಡಾ, ಪಿಂಗಳ ನಾಡಿಗಳನ್ನು ಎರಡೂ ಬಿಳಿಯ ನಾಮಗಳಾಗಿ ಗುರುತಿಸಿ ಮಧ್ಯದಲ್ಲಿರುವ ಬ್ರಹ್ಮನಾಡಿ ಎಂಬುವುದನ್ನು ಕೆಂಪಾದ ಎತ್ತರವಾದ ನಾಮವಾಗಿ ಗುರುತಿಸಿದ್ದೇವೆ. ಈ ಉದ್ಧವಾದ ಕೆಂಪು ನಾಮವು ಶರೀರದಲ್ಲಿ ಎಲ್ಲಕ್ಕಿಂತಲೂ ಮುಖ್ಯವಾದ ಆತ್ಮವಾಗಿ ತಿಳಿಯಬೇಕಾಗಿದೆ. ಪಕ್ಕದಲ್ಲಿರುವ ಸೂರ್ಯಚಂದ್ರನಾಡಿಗಳು ಮನಸ್ಸಿಗೆ ಸ್ಥಾನವಾಗಿರಲು ಮಧ್ಯದಲ್ಲಿರುವ ಬ್ರಹ್ಮನಾಡಿ ಆತ್ಮನಿಗೆ ನಿವಾಸ ಸ್ಥಳವಾಗಿದೆ. ಬ್ರಹ್ಮನಾಡಿಯನ್ನು ಆತ್ಮವಾಗಿ ಗುರುತಿಸಿದವರು ಅದನ್ನು ತಿಳಿಯುವುದೇ ಜೀವನದ ಸಾರಂಶವೆಂದು ಗುರುತಿಸಿದ್ದಾರೆ. ಶರೀರದಲ್ಲಿರುವ ಆತ್ಮಸ್ಥಾನವಾದ ಬ್ರಹ್ಮನಾಡಿ ಯನ್ನೇ ತಿರುನಾಮವೆಂದು ಕರೆಯುತ್ತಿದ್ದರು. ಆ ತಿರುನಾಮವನ್ನು ಎಂದರೆ ಆತ್ಮನನ್ನು ತಿಳಿದುಕೊಳ್ಳಲು ವರ್ಷಕ್ಕೊಂದು ಬಾರಿ ಪ್ರಜೆಗಳೆಲ್ಲರನ್ನು ದೇವಾಲಯದ ಬಳಿ ಸೇರಿಸಿ ಆತ್ಮ ಬೋಧನೆ ಮಾಡುತ್ತಿದ್ದರು. ಹಾಗೆ ಪ್ರಜೆಗಳೆಲ್ಲರಲ್ಲಿ ಆತ್ಮದ

ಬಗ್ಗೆ ಜಾಗೃತಗೊಳಿಸುತ್ತಿದ್ದರು. ಆ ವಿಧವಾಗಿ ನಡೆಯುವುದನ್ನೇ ಜಾತ್ರೆ ಎಂದು ಕರೆಯುತ್ತಿದ್ದರು ಮತ್ತು ಆತ್ಮವನ್ನು ತಿಳಿದುಕೊಳ್ಳಲು ಎಲ್ಲರೂ ಸೇರುವುದರಿಂದ ಅದನ್ನು ತಿರುನಾಮವೆಂದು ಸಹ ಕರೆಯುತ್ತಿದ್ದರು. ಆ ತಿರುನಾಮವು ಇಂದು ಇದ್ದರೂ ಉದ್ದೇಶ ಪೂರ್ತಿ ಬದಲಾಗಿಹೋಗಿದೆ. ತಿರುನಾಮ ಎಂಬುದು ದೇವರ ಹತ್ತಿರ ಭಕ್ತಿಗೇ ಅಲ್ಲದೆ ಅನೇಕ ವಿಧಗಳಾದ ಅನೇಕ ಉದ್ದೇಶಗಳಿಂದ ಹೋಗುತ್ತಿದ್ದಾರೆ. ಯಾವುದು ಹೇಗಿದ್ದರೂ ಶರೀರಾಂತರ್ಗತವಾದ ಆತ್ಮನನ್ನು ತಿಳಿಯುವ ಆಧ್ಯಾತ್ಮಿಕ ರಹಸ್ಯವೇ ತಿರುನಾಮವೆಂದು ತಿಳಿಯಬೇಕು. ಇದು ಭೌತಿಕ ಪರವಾದ ಅರ್ಥವಾಗಿದ್ದರೆ, ಅಭೌತಿಕ ಪರವಾದ ಅರ್ಥ ಮತ್ತೊಂದು ಇದೆ.

ಶರೀರದಲ್ಲಿ ನೆಲೆಸಿರುವ ಆತ್ಮಗಳು ಒಟ್ಟಿಗೆ ಮೂರು ಇವೆ. ಅವುಗಳಲ್ಲಿ ಶರೀರವನ್ನೆಲ್ಲ ವ್ಯಾಪಿಸಿಕೊಂಡಿರುವುದು ಆತ್ಮವಾಗಿದ್ದರೆ ಶರೀರದಲ್ಲಿ ಅದೂ ಶಿರಸ್ಸಿನಲ್ಲಿ ರವೆಯಷ್ಟಿರುವವನು ಜೀವಾತ್ಮ, ಮೂರನೆಯದಾದ ಪರಮಾತ್ಮ ಶರೀರವೆಲ್ಲಾ ಇದ್ದು ಶರೀರದ ಹೊರಗೂ ಸಹ ಪ್ರತಿ ವಸ್ತುವಿನಲ್ಲಿಯೂ ಹೊರಗೆ ವ್ಯಾಪಿಸಿಕೊಂಡಿದೆ. ಕ್ಷರಾಕ್ಷರರೆಂದು ಹೆಸರು ಪಡೆದಿರುವ ಜೀವಾತ್ಮ, ಆತ್ಮ ಎರಡು ಯಾವಾಗಲೂ ಜೊತೆಯಾಗಿ ಇರುತ್ತವೆ. ಜೀವಾತ್ಮ ಆತ್ಮಗಿಂತಲೂ ಅತೀತನಾದವನು ಪರಮಾತ್ಮ ಆದ್ದರಿಂದ ಮಧ್ಯದಲ್ಲಿರುವ ನಾಮಕ್ಕೆ ಕೆಂಪು ಬಣ್ಣವನ್ನಿಟ್ಟಿದ್ದಾರೆ. ಎರಡಕ್ಕಿಂತಲೂ ದೊಡ್ಡದಾದ್ದರಿಂದ ಮಧ್ಯ ನಾಮವನ್ನು ದೊಡ್ಡದಾಗಿಟ್ಟಿದ್ದಾರೆ. ಜೀವಿಗೂ, ಆತ್ಮಗೂ ಗಮ್ಯಸ್ಥಾನವೂ ಅದೇ ಆಗಿರುವುದರಿಂದ ಎರಡಕ್ಕೂ ಮಧ್ಯದಲ್ಲಿ ಇಟ್ಟಿದ್ದಾರೆ. ಜೀವಾತ್ಮ, ಆತ್ಮಗಳೆರಡು ಒಂದರೊಂದಿಗೆ ಒಂದು ಬೆರೆತು ಹೊದಾಗಲೇ ಪರಮಾತ್ಮನಾಗಿ ಬದಲಾಗಬಹುದೆಂದು ಬಿಳಿಯ ನಾಮಗಳು ಎರಡು ಕೂಡುವ ಸ್ಥಳದಿಂದ ಮಧ್ಯೆ ಕೆಂಪು ನಾಮವನ್ನು ಇಟ್ಟಿದ್ದಾರೆ. ಈ ವಿಧವಾಗಿ ಸ್ಥೂಲದಲ್ಲಿ ನಾಮವನ್ನು ಸೂರ್ಯ, ಚಂದ್ರ, ಬ್ರಹ್ಮನಾಡಿಗಳೆಂದು ಸೂಕ್ಷ್ಮವಾಗಿ ಜೀವಾತ್ಮ, ಆತ್ಮ, ಪರಮಾತ್ಮ ಎಂದು ಗುರುತಿಸಿ ತೋರಿಸಿದ್ದಾರೆ. ಮುಖ್ಯವಾದ ವಿಷಯವಾಗಿರುವುದರಿಂದ ಮುಖದ ಮೇಲೆ ಹಣೆಯ ಭಾಗದಲ್ಲಿ

ದೊಡ್ಡದಾಗಿ ಇಟ್ಟಿದ್ದಾರೆ. ಮೂರು ನಾಮಗಳಲ್ಲಿ ತಿರುನಾಮವೆಂದು ಕರೆಯಲ್ಪಡುವುದು ಶರೀರದಲ್ಲಿ ಬ್ರಹ್ಮನಾಡಿಯಲ್ಲಿನ ಆತ್ಮವನ್ನು. ಶರೀರವನ್ನು ಬಿಟ್ಟ ನಂತರ ಪರಮಾತ್ಮನನ್ನು ಸೂಚಿಸುತ್ತಿದೆ. ಪೂರ್ವದಲ್ಲಿದ್ದ ತಿರುನಾಮ ಪದವು ಈ ದಿನ ಜಾತ್ರೆ ಎಂಬ ಪದವಾಗಿ ಬದಲಾಗಿ ಸ್ಥೂಲವಾದ ಬ್ರಹ್ಮನಾಡಿ ಯೆಂದು, ಸೂಕ್ಷ್ಮವಾದ ಪರಮಾತ್ಮನೆಂದಾಗಲೀ ತಿಳಿದುಕೊಳ್ಳದೇ ಹೋಗುವುದು ನಮ್ಮ ದುರದೃಷ್ಟಕರವಾಗಿದೆ.

# 35. ಬಟ್ಟೆ ಬಯಲು (ಚಿದಂಬರ ರಹಸ್ಯ)

ಕಲಿಯುಗದಲ್ಲಿ ತಯಾರಾದ ಅನೇಕ ದೇವಾಲಯಗಳಲ್ಲಿ ಶ್ರೀರಂಗ ಪಟ್ಟಣದಲ್ಲಿನ ಶ್ರೀರಂಗನ ಆಲಯದಲ್ಲಿ ಚಿದಂಬರ ರಹಸ್ಯವೆಂಬುದು ಇದೆಯಂತೆ, ಅಲ್ಲಿಗೆ ಹೋದವರು ಶ್ರೀರಂಗನ ದೇವಾಲಯವನ್ನು ದರ್ಶನ ಮಾಡಿದ ನಂತರ ಚಿದಂಬರ ರಹಸ್ಯವನ್ನು ನೋಡುವುದು ವಾಡಿಕೆ. ಆದರೆ ಇದು ರಹಸ್ಯವೆಂದು ಅದನ್ನು ಯಾರಿಗೂ ಹೇಳಬಾರದೆಂದು ಅಲ್ಲಿನ ಹಿರಿಯರು ಹೇಳಿ ಉಳಿದವರಿಗೆ ತೋರಿಸುವುದು ನಡೆಯುತ್ತಿದೆ. ರಹಸ್ಯವೆಂಬುವುದು ಹೇಳಲಾಗದಿರುವುದು, ತೋರಿಸದಿರುವುದು ಆದಾಗ್ಯೂ ಹೇಳಕೂಡದೆಂದು ತೋರಿಸುವುದರಲ್ಲಿ ಏನು ರಹಸ್ಯವಿದೆಯೋ, ಅಲ್ಲಿ ಯಾರಿಗೂ ತಿಳಿಯದ ಯಾವುದೋ ಒಂದು ವಿಷಯವು ಇದ್ದೇ ಇರಬೇಕು. ಆದ್ದರಿಂದಲೇ ಅದನ್ನು ರಹಸ್ಯವೆನ್ನುತ್ತಿದ್ದೇವೆ. ಚಿದಂಬರ ರಹಸ್ಯವನ್ನು ಹೇಳಿದರೂ ತಿಳಿಯದಿರುವುದು ನೋಡಿದರೂ ಅರ್ಥವಾಗದ ವಿಷಯವಾದ್ದರಿಂದ ಅದನ್ನು ಚಿದಂಬರ ರಹಸ್ಯವೆಂದಿದ್ದಾರೆ. ಬಹಳಜನರಿಗೆ ಚಿದಂಬರವೆಂಬ ಹೆಸರು ವಿವರ ತಿಳಿದಿಲ್ಲ. ಚಿದಾ ಎಂದರೆ ವಸ್ತ್ರ, ಅಂಬರವೆಂದರೆ ಆಕಾಶ. ಈ ವಿಧವಾಗಿ ಚಿದಂಬರ ಎಂಬ ಪದದಲ್ಲಿ ವಸ್ತ್ರ, ಆಕಾಶ ಅಥವಾ ಬಟ್ಟೆಬಯಲು ಎಂದು ಅರ್ಥವಿದೆ. "ಚಿದಂಬರ ರಹಸ್ಯ ಬಟ್ಟೆಬಯಲು" ಎಂಬ ವಾಕ್ಯವೂ ಸಹ ಇದೆ. ಶ್ರೀರಂಗ ಪಟ್ಟಣದೊಳಗಿನ ಚಿದಂಬರವೇನೆಂಬುದನ್ನು ಸ್ವಲ್ಪ ತಿಳಿದುಕೊಳ್ಳೋಣ.

ಭಗವದ್ಗೀತೆಯ ಸಾಂಖ್ಯಾ ಯೋಗವೆಂಬ ಅಧ್ಯಾಯದಲ್ಲಿ 22ನೆಯ ಶ್ಲೋಕದಲ್ಲಿ ಭಗವಂತನು ವಾಸಾಂಸಿ ಎಂಬ ಪದವನ್ನು ಉಪಯೋಗಿಸಿ ಶ್ಲೋಕ ಹೇಳಿದ್ದಾನೆ. "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಪರಾಣಿ ತಥಾ ಶರೀರಾಣಿ ವಿಹಾಯ ಜೀರ್ಣಾ ನನ್ಯಾನಿ ಸಂಯಾತಿ ನವಾನಿ ದೇಹಿ" ಇದರಲ್ಲಿ ಹಳೆಯ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸಿದಂತೆ ಹಳೆಯ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಜೀವಿಯು ಧರಿಸುತ್ತಿದ್ದಾನೆಂದು ಹೇಳಿದ್ದಾನೆ. ಇಲ್ಲಿ ಶರೀರವನ್ನು ಬಟ್ಟೆ ಯೊಂದಿಗೆ ಹೋಲಿಸಿ ಹೇಳಿದ್ದಾನೆ. ವಸ್ತ್ರವೆಂದರೂ ಬಟ್ಟೆ ಎಂದರೂ ಚೇಲವೆಂದರೂ ಒಂದೇ ಅರ್ಥ. ಹಾಗೆಯೇ ಅಂಬರವೆಂದರೂ ಆಕಾಶವೆಂದರೂ ಬಯಲು ಎಂದರೂ ಒಂದೇ ಅರ್ಥ. ಶ್ರೀರಂಗ ದೇವಾಲಯದಲ್ಲಿ ಇರುವ ಚಿದಂಬರ ರಹಸ್ಯವೆನ್ನುವುದು ಏನೆಂದು ಪರಿಶೀಲಿಸಿ ನೋಡಿದರೆ, ಅಲ್ಲಿ ಒಂದು ದ್ವಾರಕ್ಕೆ ಅಡ್ಡವಾಗಿ ವಸ್ತ್ರವನ್ನು ಇಳಿಬಿಟ್ಟು ಕಟ್ಟಿರುತ್ತಾರೆ. ದ್ವಾರದ ಒಳಗೆ ಏನಿದೆ ಎಂಬುದು ಕಾಣಿಸದಂತೆ ಆ ವಸ್ತ್ರ ನೇತಾಕಿರುತ್ತಾರೆ. ಒಳಗೆ ಏನಿದೆಯೋ ತಿಳಿದಿಲ್ಲ ಆದ್ದರಿಂದ ಅದೇ ರಹಸ್ಯ. ಒಳಗೆ ಏನಿದೆಯೋ ನೋಡಬೇಕೆಂದುಕೊಂಡವರು ಅಲ್ಲಿರುವವರನ್ನು ಕೇಳಿ ಅನುಮತಿ ತೆಗೆದುಕೊಳ್ಳಬೇಕಾಗಿರುತ್ತದೆ. ನೋಡಬೇಕೆಂದುಕೊಳ್ಳುವವರಿಗೆ ತೋರಿಸುವವರಿರುತ್ತಾರೆ. ಅವರು ನೋಡುವವರಿಗೆ ಇಲ್ಲಿ ನೋಡಿರುವುದು ರಹಸ್ಯ. ಆದ್ದರಿಂದ ಯಾರಿಗೂ ಹೇಳಬಾರದೆಂದು ಹೇಳಿ ತೋರಿಸುತ್ತಿದ್ದಾರೆ.

ಎಷ್ಟೋ ಜನ ಚಿದಂಬರ ರಹಸ್ಯವನ್ನು ನೋಡಿದರೂ ನೋಡುವುದಕ್ಕೆ ಮುಂಚೆ ಇದ್ದ ಆತುರ ನೋಡಿದ ನಂತರ ಇರುವುದಿಲ್ಲ. ಏಕೆಂದರೆ ನೋಡಬೇ ಕೆಂದು ಕೊಳ್ಳುವವರು ನೋಡುವ ಮುನ್ನ ರಹಸ್ಯವನ್ನು ಎಂದರೆ ನೋಡಬೇ ಕಾಗಿರುವುದನ್ನು ಕುರಿತು ಏನನ್ನೋ ಊಹಿಸಿಕೊಂಡಿರುತ್ತಾರೆ. ಯಾರೇನೇ ಊಹಿಸಿಕೊಂಡರೂ ಬಟ್ಟೆ ತೊಲಗಿಸುತ್ತಲೇ ಯಾರಿಗು ಏನೂ ಕಾಣಿಸದಂತೆ ಹೋಗುವುದೇ ಆಶ್ಚರ್ಯ. ಅಲ್ಲಿ ಒಂದು ದ್ವಾರ ಅದಕ್ಕೆ ಅಡ್ಡವಾಗಿ ಒಂದು ಬಟ್ಟೆ ಇರುತ್ತದೆಂದು ಕೊಂಡಿದ್ದೇವೆ! ನೋಡಬೇಕೆಂದಿರುವವರಿಗೆ ದ್ವಾರದ ಮುಂದೆ

ನಿಲ್ಲಿಸಿ ಬಟ್ಟೆ ತೆಗೆದು ತೋರಿಸುತ್ತಾರೆ. ಬಟ್ಟೆ ತೆರೆದು ನೋಡಿದೊಡನೆಯೇ ಅಲ್ಲಿ ಯಾವ ವಸ್ತುವಾಗಲಿ, ಆಕಾರವಾಗಲಿ ಇಲ್ಲದಿರುವುದು ಆಶ್ಚರ್ಯವಾಗುತ್ತದೆ. ಮೇಲ್ಛಾವಣಿ ಇಲ್ಲದ ಆಕಾಶ ಮಾತ್ರ ಕಾಣಿಸುತ್ತದೆ. ಬಟ್ಟೆ ತೆಗೆದು ಅಲ್ಲಿ ಏನೂ ಇಲ್ಲವೆನ್ನುವಂತೆ ತೋರಿಸುವವರನ್ನು ಕೇಳಿದಾಗ ಆಕಾಶದ ಕಡೆ ತೋರಿಸಿ ಇಲ್ಲಿ ನೀವು ನೋಡ ಬೇಕಾಗಿರುವುದು, ಕಾಣಿಸುವುದು ಇದೆಯೆಂದು ಹೇಳುತ್ತಾರೆ. ಏನೂ ಇಲ್ಲದಿರುವುದೇ ಚಿದಂಬರ ರಹಸ್ಯ. ಇಲ್ಲಿ ಏನು ಇಲ್ಲವೆಂದು ಹೇಳಿದರೆ ಯಾರೂ ಬರುವುದಿಲ್ಲ. ಆದ್ದರಿಂದ ನೀವು ಇದನ್ನು ರಹಸ್ಯವಾಗಿ ಯಾರಿಗೂ ಹೇಳಬಾರದೆಂದು ಹೇಳುತ್ತಾರೆ. ಹೇಳಿದರೆ ಏನಾಗುತ್ತದೆಯೋ ಏನು ಕೆಡು ಆಗುತ್ತದೆಯೋ ಎಂದು ನೋಡಿ ಬಂದವರೂ ಸಹ ಹೇಳದಿರುವುದು ನಡೆಯುತ್ತಿದೆ. ಆಚಾರವಿದ್ದರೂ ಅರ್ಥವಿಲ್ಲದೇ ಹೋಗಿದೆ. ಆಧ್ಯಾತ್ಮಿಕ ಪರವಾದ ಪರಮಾರ್ಥಿಕವಾದ ಅರ್ಥ ಹೇಳಿಕೊಳ್ಳದೆ ಇಲ್ಲಿ ನೋಡಿದ್ದನ್ನು ಯಾರಿಗೂ ಹೇಳಬೇಡವೆನ್ನುವುದು ತಪ್ಪಾಗುತ್ತದೆ. ಯಾರು ಯಾರಿಗೆ ಹೇಳಿದರೂ ಚಿದಂಬರ ಎನ್ನುವುದು ರಹಸ್ಯವೆಂಬ ಅರ್ಥದಿಂದಲೇ ಇರುತ್ತದೆ. ಇಂತಹ ರಹಸ್ಯವಿದೆ ಎಂದು ತೋರಿಸುವ ವಿಧಾನವೇ ಚಿದ ಅಂಬರ.

ಜೀವಿಯು ಶರೀರದಲ್ಲಿರುವ ತನಕ ಮೋಕ್ಷ ಹೊಂದಲಾರನು. ಕರ್ಮ ವಿಲ್ಲದಂತೆ ಮಾಡಿಕೊಂಡು ಶರೀರ ಹೊಂದದೇ ಹೋದಾಗ ಪರಮಾತ್ಮನೊಳಗೆ ಐಕ್ಯವಾಗಿ ಹೋಗುತ್ತಾನೆ. ಇತ್ತ ಶರೀರ ಅತ್ತ ಮೋಕ್ಷ ಎರಡೇ ಗಮ್ಯಗಳು ಜೀವನಿಗಿರುವವು ಎಂಬುದು ಸತ್ಯ. ಶರೀರವಿರುವವರೆಗೂ ದೇವರು ತಿಳಿಯಲಾರನು. ಹುಟ್ಟು ಸಾವುಗಳಿರುವ ಶರೀರ ದೇವರಿಗೂ, ನಿನಗೂ ಮಧ್ಯದಲ್ಲಿ ಅಡ್ಡವಾಗಿ ಇದೆ. ಹುಟ್ಟಿನಿಂದ ಪ್ರಾರಂಭವಾಗಿ ಸಾವಿನಲ್ಲಿ ಅಂತ್ಯವಾಗಿ ಪುನಃ ಕೂಡಲೇ ಹುಟ್ಟಿನಿಂದ ಶರೀರ ಜೀವಿಗೆ ತಗುಲಿಕೊಳ್ಳುತ್ತದೆ. ಶರೀರ ಬಟ್ಟೆಯಂತ ಹುದೆಂದು ಹಳೆಯ ಬಟ್ಟೆ ಹೋಗುತ್ತಲೇ ಹೊಸ ಬಟ್ಟೆ ತಗುಲಿಕೊಳ್ಳುತ್ತದೆ ಎಂದು ಗೀತೆಯಲ್ಲಿ ದೇವರು ಹೇಳಿದ್ದಾನೆ. ಆದ್ದರಿಂದ ಆ ಬಟ್ಟೆ ಇಲ್ಲದೇ ಹೋದರೆ ನೀನು ದೇವರ ಬಳಿಗೆ ಸೇರಬಹುದೆಂದು ಶರೀರವನ್ನು ಬಟ್ಟೆಯಾಗಿ,

ಪರಮಾತ್ಮನನ್ನು ಬಯಲಾಗಿ ತೋರಿಸಿದ್ದಾರೆ. ಶರೀರವನ್ನು ಬಟ್ಟೆಯೆಂದು. ಪರಮಾತ್ಮನನ್ನು ಬಯಲೆಂದು ಶರೀರವನ್ನು, ಪರಮಾತ್ಮನನ್ನು ಬಟ್ಟೆಬಯಲಾಗಿ ಹೋಲಿಸಿದ್ದಾರೆ. ಬಟ್ಟೆ ತೆಗೆದಾಗಲೇ ಬಯಲು ಕಾಣಿಸುವುದೆಂದು, ಶರೀರವಿಲ್ಲದಿರುವಾಗಲೇ ದೇವರು ತಿಳಿಯುವನೆಂದು ತಿಳಿಸುವುದೇ ಚಿದಂಬರ ರಹಸ್ಯ. ಬಾಹ್ಯಾರ್ಥವಾಗಿ ಬಟ್ಟೆಯನ್ನು, ಬಯಲನ್ನು ನೋಡಿದರೂ ಶರೀರಧಾರಿಗಳಾದ ಜೀವಿಗಳು ಪರಮಾತ್ಮನನ್ನು ತಿಳಿಯದವರಾಗಿದ್ದಾರೆಂದು ಹೇಳುವುದಕ್ಕೆ ತಿಳಿಯದಿರುವುದು ರಹಸ್ಯವೆಂದು ಚಿದಂಬರಕ್ಕೆ ರಹಸ್ಯವೆಂಬ ಪದವನ್ನು ಸೇರಿಸಿದ್ದಾರೆ. ಆ ವಿವರ ತಿಳಿಯದೇ ಇದು ರಹಸ್ಯ ಯಾರಿಗೂ ಹೇಳಬಾರದು ಎನ್ನುವುದರಲ್ಲಿ ಅರ್ಥವಿಲ್ಲ. ಚೇಲ ಎಂದರೆ ಸಮತ ಶರೀರವೆಂದು ಅಂದುಕೊಂಡಿದ್ದೇವೆ! ಸಾವಿನಿಂದ ಹೋಗುವ ಶರೀರ ಆ ಕ್ಷಣದಲ್ಲಿಯೇ ಜನ್ಮದಿಂದ ಜೀವಿಗೆ ತಗುಲಿಕೊಳ್ಳುತ್ತಿದೆ. ಆದ್ದರಿಂದ ಯಾವಾಗಲೂ ಬಯಲಾಗಿ ಹೋಲಿಸಲ್ಪಟ್ಟ ಪರಮಾತ್ಮನಿಗೆ ಚೇಲವಾಗಿ ಹೋಲಿಸಲ್ಪಟ್ಟ ಶರೀರ ಅಡ್ಡವಾಗಿದೆ ಎಂದು ತಿಳಿಸುವುದಕ್ಕೇ ಶ್ರೀರಂಗದೊಳಗಿನ ಚಿದಂಬರವೆಂದು ತಿಳಿಯಬೇಕು. ಬಟ್ಟೆ ಅಡ್ಡವಿರಲು ಆಚೆ ಇರುವ ಬಯಲು ಎಂದಿಗೂ ಕಾಣಿಸುವುದಿಲ್ಲವೆಂದು ತಿಳಿಸುತ್ತ ನಿಮಗೆ ಶರೀರವೆಂಬ ಚೇಲ ಅಡ್ಡವಿರುವುದರಿಂದ ಬಯಲೆಂಬ ಪರಮಾತ್ಮ ತಿಳಿಯುವುದಿಲ್ಲಂದು ತಿಳಿಸುವ ನಿಮಿತ್ತ ರಹಸ್ಯವೆನ್ನುವುದರಲ್ಲಿ ಅರ್ಥವಿರುತ್ತದೆ.

ಬಟ್ಟೆ ತೆಗೆದರೆ ಬಯಲು, ಬಟ್ಟೆ ತೆಗೆಯದೇ ಹೋದರೆ ಬಯಲು ಇಲ್ಲ. ಹಾಗೆಯೇ ಶರೀರ ಹೋದರೇನೆ ಮೋಕ್ಷವೆಂದು ತಿಳಿಸುತ್ತಾ ಬಟ್ಟೆಯಿಲ್ಲದ ಸ್ಥಿತಿಯಾದುದನ್ನು "ಅಚೇಲ" ಎಂದಿದ್ದಾರೆ. ಚೇಲವೆಂದರೆ ಬಟ್ಟೆ, ಅಚೇಲವೆಂದರೆ ಶರೀರವಿಲ್ಲದ ಮೋಕ್ಷವೆಂದು ಹೇಳಿದ್ದಾರೆ. ಅಜ್ಞಾನದಲ್ಲಿದ್ದು ಶರೀರದಿಂದ ಜನ್ಮಗಳೆತ್ತುತ್ತಿರುವವರನ್ನು ಚೇಲರೆಂದು, ಜ್ಞಾನ ಉಂಟಾಗಿ ಜನ್ಮವಿಲ್ಲದ ಸ್ಥಿತಿಯನ್ನು ಕೋರುತ್ತಿರುವವರನ್ನು ಅಚೇಲರೆಂದು ಪೂರ್ವದಲ್ಲಿ ದೊಡ್ಡವರು ಹೇಳುತ್ತಿದ್ದರು. ಶರೀರವನ್ನು ಚೇಲವೆಂದು ಮೋಕ್ಷವನ್ನು ಅಚೇಲವೆಂದು ಪೂರ್ವದಲ್ಲಿ ಹೇಳುತ್ತಿದ್ದರು. ಮೋಕ್ಷಮಾರ್ಗವನ್ನು ಅಚೇಲವೆಂದು ಅಜ್ಞಾನವನ್ನು ಚೇಲವೆಂದು

ಸಹ ಕರೆಯುತ್ತಿದ್ದರು. ಜ್ಞಾನಮಾರ್ಗವಾದ ಅಚೇಲವೆಂಬ ಪದವು ಕಾಲಕ್ರಮದಲ್ಲಿ ಅಚಲವಾಗಿ ಬದಲಾಗಿದೆ. ಜ್ಞಾನ ಮಾರ್ಗವನ್ನು ಅನುಸರಿಸುವವರು ಇಂದಿಗೂ ಇದ್ದಾರೆ. ಆದರೆ ಅವರು ನಮ್ಮದು ಅಚಲ ಎಂಬುವುದು ಅರ್ಥವಿಲ್ಲದ ಮಾತು. ಅವರು ನಮ್ಮದು ಅಚೇಲವೆಂದು ಹೇಳಬಹುದು. ಆದರೆ ಅಚಲವೆಂದು ಹೇಳಬಾರದು. ಸರಿಯಾದ ಅರ್ಥದ ಪ್ರಕಾರ ಚಿದಅಂಬರವನ್ನು ಚೇಲ, ಅಚೇಲ ಎನ್ನಬಹುದು. ದೇವಾಲಯದಲ್ಲಿ ತೋರಿಸಿರುವಂತೆ ನೀವು ಬಟ್ಟೆ ಪಾರ್ಟಿಯೋ, ಬಯಲು ಪಾರ್ಟಿಯೋ ಯೋಚಿಸಿಕೊಳ್ಳಿರಿ. ಚೇಲವಲ್ಲದ ಅಚೇಲವನ್ನು ಹೊಂದಿರಿ. ಬಟ್ಟಬಯಲು ರಹಸ್ಯವನ್ನು ಚೇದಿಸಿ ಬಟ್ಟೆಯನ್ನು ಬಿಟ್ಟು ಬಯಲಿನಲ್ಲಿ ಸೇರೋಣ.

# 36. ದೇವದಾಸಿಯರು

ಇಲ್ಲಿಯವರೆವಿಗೂ ದೇವಾಲಯದ ನಿರ್ಮಾಣಗಳನ್ನು ಕುರಿತು, ಅವುಗಳ ಪೂಜಾ ವಿಧಾನಗಳನ್ನು ಕುರಿತು ತಿಳಿದುಕೊಂಡಿದ್ದೇವೆ. ಇನ್ನು ಸ್ವಲ್ಪ ತಿಳಿದುಕೊಳ್ಳಬೇಕಾಗಿದೆ. ಅದೇನೆಂದರೆ! ಮಾನವರಲ್ಲಿ ಸ್ತ್ರೀ ಪುರುಷ ಜಾತಿಗಳು ಎರಡೇ ಎರಡು ಇವೆ. ದ್ವಿಜಾತಿಗಳಾದ ಮಾನವರಲ್ಲಿ ಸ್ತ್ರೀಯರಿಗಿಂತಲೂ ಭಿನ್ನವಾಗಿರುವವರು ಮತ್ತು ಪುರುಷರಿಗಿಂತಲೂ ಭಿನ್ನವಾಗಿರುವವರು ಸಹ ಇದ್ದಾರೆ. ಸ್ತ್ರೀ ಜಾತಿಯಲ್ಲಿ ಉದ್ಭವಿಸಿದ ಸ್ತ್ರೀಗೆ ಇರಬೇಕಾದ ಮನೋ ಭಾವನೆ, ಶರೀರ ಅನುಕೂಲ ಅಥವಾ ಶೃಂಗಾರವೆಂದರೆ ಏನೋ ತಿಳಿಯದೆ, ತಿಳಿದರೂ ಯಾವ ಆಸಕ್ತಿ ಇಲ್ಲದೇ ಇರುವವರು. ಅವರು ಮಾಚಕಮ್ಮರೆಂದು ಕರೆಯಲ್ಪಡುತ್ತಿದ್ದಾರೆ. ಶೃಂಗಾರ ಮನೋಭಾವನೆ ಇಲ್ಲದಿರುವಂತೆಯೇ ಇವರಿಗೆ ಮಾಸ ಮಾಸಕ್ಕೂ ಋತುಸ್ರಾವ ಬಹಿಷ್ಠೆ ಆಗುವುದಿಲ್ಲ. ಎಷ್ಟು ವಯಸ್ಸಾದರೂ ಬಾಲ್ಯದಲ್ಲಿನ ಮಾದರಿಯಂತೆಯೇ ಇವರ ಶರೀರವಿರುತ್ತದೆ. ಶೃಂಗಾರ ಮನೋಭಾವನೆಯೂ ಸಹ ಬಾಲ್ಯದಲ್ಲಿ ತಿಳಿಯದಿರುವಂತೆಯೇ ದೊಡ್ಡವರಾದರು ಆಸಕ್ತಿಯಿಲ್ಲದವರಾಗಿ

ಇರುತ್ತಿದ್ದರು. ಇಂತಹ ಸ್ತ್ರೀಯರು ಸಂಸಾರ ಜೀವನದ ಕೆಲಸಕ್ಕೆ ಬಾರುವುದಿಲ್ಲ. ಆದ್ದರಿಂದ ಮಾನವ ಸಂಘಕ್ಕೆ ದೂರವಾಗಿ ಇರಬೇಕೆಂಬ ಕೋರಿಕೆ ಇವರಲ್ಲಿರುತ್ತದೆ. ಅಂತಹವರು ಸಂಸಾರ ಜೀವನಗಳಿಂದ ಕೂಡಿಕೊಂಡಿರುವ ಮನುಷ್ಯರ ಮಧ್ಯೆ ಗೃಹಗಳಲ್ಲಿ ಇರದೆ ಆತ್ಮಜ್ಞಾನವೇ ನಿಲಯಗಳಾಗಿರುವ ದೇವಾಲಯಗಳಲ್ಲಿ ವಾಸ ಮಾಡುತ್ತಿದ್ದರು.

ದೇವಾಲಯಗಳಲ್ಲಿ ವಾಸಿಸುತ್ತ ದೇವರಿಗೆ ಯಾವುದೋ ಒಂದು ರೀತಿಯಲ್ಲಿ ಸೇವೆ ಮಾಡುತ್ತಿದ್ದರು. ದೇವಾಲಯದಲ್ಲಿ ಕಸ ಗುಡಿಸುವುದರಿಂದ ಹಿಡಿದು ಪೂಜಾ ವಿಧಾನದವರೆಗೂ ನಿತ್ಯವೂ ಕೆಲಸಗಳನ್ನು ಮಾಡುತ್ತಿದ್ದರು. ಇನ್ನು ಕೆಲವರು ನಾಟ್ಯ ಕಲಿತು ದೇವರ ಮುಂದೆ ನಾಟ್ಯವಾಡಿ ದೇವಾಲಯಕ್ಕೆ ಬರುವ ಭಕ್ತರನ್ನು ಆಕರ್ಷಿಸಿ ಭಕ್ತರ ಸಂಖ್ಯೆ ಬೆಳೆಸಲು ಪ್ರಯತ್ನಿಸುತ್ತಿದ್ದರು. ಮತ್ತೆ ಕೆಲವರು ಸಂಗೀತ ಕಲಿತು ಗಾನಾಲಾಪನೆಗಳನ್ನು ಉದಯದಲ್ಲೂ, ಸಾಯಂಕಾಲದಲ್ಲೂ ಮಾಡುತ್ತಾ ಬರುವ ಭಕ್ತರಿಗೆ ಇಂಪಾಗುವಂತೆ ಮಾಡುತ್ತಿದ್ದರು. ಈ ವಿಧವಾಗಿ ಸಂಸಾರ ಜೀವನಕ್ಕೆ ಕೆಲಸಕ್ಕೆ ಬಾರದ ಮಾಚ ಕಮ್ಮರು ದೇವಾಲಯಗಳಲ್ಲಿ ನಿವಾಸವನ್ನು ಏರ್ಪಡಿಸಿಕೊಂಡು ಯಾವುದೋ ಒಂದು ವಿಧವಾಗಿ ಸೇವೆ ಮಾಡುತ್ತಿರುವುದು ಪೂರ್ವದಲ್ಲಿ ಆಚಾರವಾಗಿದ್ದಿತು. ಅಂತಹ ಮಾಚಕಮ್ಮರನ್ನು ದೇವದಾಸಿಯರು ಎನ್ನುವುದು ನಡೆದಿದೆ.

ಕಾಲ ಉರುಳುತ್ತಿದ್ದಂತೆ ದೇವದಾಸಿಯರೆಂದರೆ ವೇಶ್ಯರ ಕೆಳಗೆ ಜಮಕಟ್ಟುವಂತಹ ಕಾಲ ಆಸನ್ನವಾಗಿದೆ. ಇಂದಿನ ದೇವದಾಸಿಯರಲ್ಲಿ ಮಾಚ ಕಮ್ಮರು ಇಲ್ಲ. ಅವರ ಸ್ಥಾನದಲ್ಲಿ ಸಾಧಾರಣ ಸ್ತ್ರೀಯರೇ ಪ್ರವೇಶಿಸಿದ್ದಾರೆ. ಇಂದಿನ ದೇವದಾಸಿಯರು ದೇವಾಲಯಗಳಲ್ಲಿ ನಿವಾಸವಿರದೇ ಗೃಹಗಳಲ್ಲಿಯೇ ಇದ್ದು ವೇಶ್ಯಾವೃತ್ತಿ ಸಾಗಿಸುತ್ತಿದ್ದಾರೆ. ಗ್ರಾಮ ದೇವತೆಗೆ ಕೋಣವನ್ನು ಬಿಟ್ಟು ಕಟ್ಟಿಹಾಕಿದಂತೇ, ಯಾವುದೇ ಹೊಲದಲ್ಲಿ ಮೇದರೂ ಅಡ್ಡಿಯಿಲ್ಲದಂತೆ ಒಂದು ದೇವತೆಯ ಹೆಸರಿನ ಮೇಲೆ ಒಬ್ಬ ಸ್ತ್ರೀಗೆ ವಿವಾಹ ಮಾಡದೇ ಬಿಟ್ಟು ಹಾಕುವುದು ದೇವದಾಸಿಯನ್ನು ಬಸವಿಯನ್ನು ಮಾಡಿದಂತಾಗುತ್ತದೆ. ಆಕೆಯ ಬಳಿಗೆ ಯಾವ

ಪುರುಷನಾದರೂ ಹೋಗಬಹುದು. ಈ ಪದ್ಧತಿ ಕೆಲವು ಕುಲಗಳಲ್ಲಿ ಸ್ಥಳ ಮಾಡಿಕೊಂಡಿದೆ. ದೇವದಾಸಿಯಾಗಿ ಬದಲಾಗುವ ಸ್ತ್ರೀ ಇಷ್ಟವಿದ್ದರೂ, ಇಲ್ಲದಿದ್ದರೂ ದೊಡ್ಡವರು ಹೇಳಿದಂತೆ ಕೇಳಿಬದಲಾಗ ಬೇಕಾಗಿರುವ ಪರಿಸ್ಥಿತಿ ಇದೆ.

ಪೂರ್ವದಲ್ಲಿನ ದೇವದಾಸಿಯರು ನಿವಾಸಕ್ಕೆ ಯೋಗ್ಯರಲ್ಲದವರಾಗಿದ್ದರೆ, ಇಂದಿನವರು ಯೋಗ್ಯರಾಗಿದ್ದರೂ ಸಹ ದೇವದಾಸಿತನವನ್ನು ಮಾಡುತ್ತಿದ್ದಾರೆ. ಪೂರ್ವಕಾಲದಲ್ಲಿ ಮಾಚಕಮ್ಮರು ನಿಸ್ವಾರ್ಥದಿಂದ ದೈವ ಸೇವೆಮಾಡಿ ದೇವದಾಸಿಯರೆಂದು ಹೆಸರು ತಂದುಕೊಂಡಿದ್ದರೆ, ಇಂದಿನ ಕಾಲದಲ್ಲಿ ಸ್ವಾರ್ಥದಿಂದ ವೇಶ್ಯಾವೃತ್ತಿ ಸಾಗಿಸುತ್ತಿದ್ದಾರೆ. ಪೂರ್ವಕಾಲದಲ್ಲಿದ್ದ ದೇವದಾಸಿಯ ರನ್ನು ಪವಿತ್ರ ಭಾವನೆಯಿಂದ ಎಲ್ಲರೂ ಗೌರವಿಸುತ್ತಿದ್ದರು. ಈ ಕಾಲದ ದೇವದಾಸಿಯರನ್ನು ಎಲ್ಲರೂ ನೀಚ ಭಾವನೆಯಿಂದ ನೋಡುತ್ತಿದ್ದಾರೆ. ಪೂರ್ವ ಕಾಲದ ದೇವದಾಸಿಯರಲ್ಲಿ ಭಕ್ತಿ, ಜ್ಞಾನ ಪ್ರವೃತ್ತಿಗಳು ಎಷ್ಟೋ ಇರುತ್ತಿದ್ದವು. ಇಂದು ಯಾವ ಭಕ್ತಿ ಜ್ಞಾನವಿಲ್ಲದವರು ದೇವದಾಸಿಗಳಾಗಿದ್ದಾರೆ. ಪ್ರಸ್ತುತ ಕಾಲದಲ್ಲಿ ದೇವದಾಸಿಯರನ್ನು "ಬಸವೆಯರೆಂದು" ಕರೆಯುವುದು ಸಹ ನಡೆಯುತ್ತಿದೆ. ನಾಗರೀಕತೆ ಬೆಳೆಯುತ್ತಿದ್ದಂತೆ ಈ ಬಸವೆಯರ ಸಂಖ್ಯೆ ಕಡಿಮೆಯಾಗುತ್ತಿದೆ, ಆದಾಗ್ಯೂ ಕೆಲವು ಕುಲಗಳಲ್ಲಿ ಸ್ತ್ರೀಯರನ್ನು (ಬಸವೆಯ) ದೇವದಾಸಿಯರನ್ನಾಗಿ ಮಾಡುವುದು ಇಂದಿಗೂ ಅಲ್ಲಲ್ಲಿ ನಡೆಯುತ್ತಿದೆ.

# 37. ದೇವದಾಸರು

ಸ್ತ್ರೀ ಜಾತಿಯಲ್ಲಿ ಮಾಚ ಕಮ್ಮರಿರುವಂತೆಯೇ ಪುರುಷ ಜಾತಿಯಲ್ಲಿಯೂ ಸಹ ನಪುಂಸಕರಿದ್ದಾರೆ. ಅವರೂ ಸಹ ಮಾಚಕಮ್ಮರಂತೆ ಸಂಸಾರ ಜೀವನಕ್ಕೆ ಕೆಲಸಕ್ಕೆ ಬಾರದ ಪುರುಷತ್ವವಿಲ್ಲದ ಶರೀರಹೊಂದಿರುತ್ತಾರೆ. ಇವರೂ ಸಹ ಪೂರ್ವದಲ್ಲಿ ದೇವಾಲಯಗಳಲ್ಲಿಯೇ ಸ್ಥಾನ ಏರ್ಪಡಿಸಿಕೊಂಡು, ಅಲ್ಲಿಯೇ

ದೈವ ಸೇವೆಗಳನ್ನು ಮಾಡುತ್ತಿದ್ದರು. ಅಂತಹ ನಪುಂಸಕರು ನಾಟ್ಯವೃತ್ತಿ, ಸಂಗೀತ ಮೊದಲಾದವುಗಳಲ್ಲಿಯೂ ಸಹ ಪ್ರವೀಣರಾಗಿ ದೇವಾಲಯಗಳಿಗೆ ಶೋಭೆಯನ್ನು ಕೈಗೂಡಿಸುತ್ತಿದ್ದರು. ನಿಸ್ವಾರ್ಥವಾಗಿ ದೈವ ಸೇವೆಗಳನ್ನು ಮಾಡುವ ಆ ನಪುಂಸಕರನ್ನು ದೇವದಾಸರೆಂದು ಕರೆಯುತ್ತಿದ್ದರು. ಇಂದಿನ ಕಾಲದಲ್ಲಿ ಯಾವ ಗುಡಿಯಲ್ಲಿಯೂ ದೇವದಾಸಿಯರಾಗಲಿ, ದೇವದಾಸರಾಗಲಿ ಕಾಣಿಸುತ್ತಿಲ್ಲ. ಇಂದಿನ ನಪುಂಸಕರು ಸ್ತ್ರೀಯರಂತೆಯೇ ಅವರೊಂದು ಯಾಚಕ ವೃತ್ತಿಯನ್ನು ಮಾಡುತ್ತಾ ಕಾಲ ಕಳೆಯುತ್ತಿದ್ದಾರೆ. ಇವರನ್ನು ಹುಲಿಗಮ್ಮರೆಂದು ಕರೆಯುತ್ತಾರೆ. ಪುರುಷಾಕಾರರಾದ ಇವರು ಈಗಲೂ ಕರ್ನಾಟಕದಲ್ಲಿ ಸಂಪ್ರದಾಯ ಸಿದ್ಧವಾಗಿ ಕೆಲವು ಸ್ತ್ರೀ ದೇವತೆಗಳ ದೇವಾಲಯಗಳಲ್ಲಿ ವರ್ಷಕ್ಕೊಮ್ಮೆಯಾದರೂ ನಾಟ್ಯ ಮಾಡುವುದು, ಹಾಡು ಹಾಡುವುದು ನಡೆಯುತ್ತಿದೆ.

ಗಮನಿಸಬೇಕಾಗಿರುವ ವಿಷಯವೇನೆಂದರೆ! ಸ್ತ್ರೀ ಜಾತಿಯೊಳಗಿನ ಯಾಚಕಮ್ಮರಾದ ದೇವದಾಸಿಯರು ಪುರುಷ ದೇವಾಲಯಗಳಲ್ಲಿಯೇ ನಿವಾಸಿಸುತ್ತಿದ್ದರು. ಹಾಗೆಯೇ ನಪುಂಸಕರಾದ ದೇವದಾಸರು ಸ್ತ್ರೀ ದೇವತೆಗಳ ಗುಡಿಗಳಲ್ಲಿಯೇ ನಿವಾಸವಿರುತ್ತಿದ್ದರು. ಆದ್ದರಿಂದ ಇಂದಿಗೂ ದೇವದಾಸರು ಸ್ತ್ರೀ ದೇವಾಲಯಗಳಲ್ಲಿ ನಾಟ್ಯ ಮಾಡುವುದು, ಹಾಡುಗಳು ಹಾಡುವುದು ನಡೆಯುತ್ತಿದೆ. ಹಾಗೆಯೇ ಇಂದು ವೇಶ್ಯಾ ವೃತ್ತಿ ಮಾಡುವವರೂ ಸಹ ಪುರುಷ ದೇವಾಲಯಗಳಲ್ಲಿ ನಾಟ್ಯ ಮಾಡುತ್ತಿರುವುದು ನಡೆಯುತ್ತಿದೆ. ಸ್ತ್ರೀ ದೇವಾಲಯಗಳಲ್ಲಿ ನಪುಂಸಕರು ಸಂಪ್ರದಾಯ ಸಿದ್ಧವಾಗಿ ಹಣ ತೆಗೆದುಕೊಳ್ಳದೇ ಅವರೇ ಪೂಜೆ ಮಾಡಿ, ನಾಟ್ಯ ಮಾಡಿ ಹಾಡು ಹಾಡುವುದು ಕರ್ನಾಟಕ ಇನ್ನು ಮೊದಲಾದ ಪ್ರಾಂತಗಳಲ್ಲಿ ಇಂದಿಗೂ ಇದೆ. ವೇಶ್ಯಾವೃತ್ತಿಯನ್ನು ಕೈ ಹಿಡಿದ ಸ್ತ್ರೀಯರು ಹಬ್ಬದ ಸಮಯದಲ್ಲಿಯೂ ಸಹ ಹಣ ತೆಗೆದುಕೊಂಡು ನಾಟ್ಯವಾಡುತ್ತಿರುವುದು ಇಂದಿಗೂ ನೋಡುತ್ತಿದ್ದೇವೆ. ಭೋಗ ಸಾನಿಗಳ ನಾಟ್ಯವೆಂದು ಪುರುಷ ದೇವಾಲಯಗಳಲ್ಲಿ ಹಬ್ಬದ ದಿನಗಳಲ್ಲಿ ನಡೆಯುವುದು ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ. ಪೂರ್ವಕಾಲದ ದೇವದಾಸಿ

ಯರಿಗೂ, ದೇವದಾಸರಿಗೂ ಇಂದಿನ ಕಾಲದಲ್ಲಿನ ದೇವದಾಸಿಯರಿಗೂ, ದೇವದಾಸರಿಗೂ ಎಷ್ಟು ವ್ಯತ್ಯಾಸವಿದೆಯೋ ನೀವೆ ಯೋಚಿಸಿರಿ.

# 38. ನಕ್ಷತ್ರ

ಪ್ರಪಂಚ ಕೆಲ ಕಾಲವಿದ್ದು ಮತ್ತೆ ಕೆಲವು ಕಾಲ ಇಲ್ಲದಂತೆ ಹೋಗುತ್ತದೆ. ಪ್ರಪಂಚವಿರುವಾಗಲೇ ಈ ಜೀವರಾಶಿಗಳು ಸಾಯುತ್ತ, ಹುಟ್ಟುತ್ತ ಕಷ್ಟ ಸುಖಗಳನ್ನು ಅನುಭವಿಸುತ್ತಿವೆ. ಪ್ರಪಂಚವಿಲ್ಲದಿರುವಾಗ ಯಾವ ಜೀವರಾಶಿಯು ಇಲ್ಲ. ಏನೂ ತಿಳಿಯದ ಪಂಚಭೂತಗಳೇ ಇಲ್ಲದ ಅಗಮ್ಯ ಗೋಚರವಾಗಿರುವ ಸ್ಥಿತಿಯೇ ಪ್ರಪಂಚವಿಲ್ಲದ ಸ್ಥಿತಿ. ಜಗತ್ತೆಲ್ಲವೂ ನಾಶವಾದರೂ ನಾಶವಾಗದಿರುವಂಥಾದ್ದು ಒಂದಿದೆ ಅದೇ ಪರಮಾತ್ಮ. ಅದರಲ್ಲಿ ಐಕ್ಯವಾದ ಜೀವಿಗಳು ತಾವೂ ಸಹ ಪರಮಾತ್ಮನಂತೆ ನಾಶವಿಲ್ಲದವರಾಗಿದ್ದಾರೆ. ಪ್ರಪಂಚವಿರುವಾಗ ಮತ್ತು ಇಲ್ಲದಿರುವಾಗ ಚಿರಕಾಲ ಬದಲಾವಣೆ ಯಾಗದವನಂತೆ ಇರುವವನೇ ಪರಮಾತ್ಮ. ನಮಗೆ 12 ಗಂಟೆಗಳ ಕಾಲ ಹಗಲು, 12 ಗಂಟೆಗಳ ಕಾಲ ರಾತ್ರಿಯಾಗುವಂತೆ ಪರಮಾತ್ಮನಿಗೆ ಸಾವಿರ ಯುಗಗಳು ಹಗಲು, ಸಾವಿರಯುಗಗಳು ರಾತ್ರಿಯಾಗಿದೆ. ಪರಮಾತ್ಮನ ಒಂದು ಹಗಲು ಸಾವಿರ ಯುಗಗಳಲ್ಲಿ ಜೀವರಾಶಿಗಳಿವೆ. ಪರಮಾತ್ಮನ ರಾತ್ರಿ ಕಾಲದ ಸಾವಿರ ಯುಗಗಳಲ್ಲಿ ಜೀವರಾಶಿಗಳು ಇಲ್ಲ ಮತ್ತು ಪ್ರಪಂಚವೂ ಇಲ್ಲ. ಪ್ರಪಂಚವಿರುವಾಗ ಪ್ರಪಂಚವಿಲ್ಲದಿರುವಾಗ ಚಿರಕಾಲ ಪರಮಾತ್ಮನಿದ್ದಾನೆ.



**(ನಕ್ಷತ್ರ)**

ನಕ್ಷತ್ರ ರಾತ್ರಿಯ ವೇಳೆಯಲ್ಲಿ ಕಾಣಿಸುತ್ತದೆ. ಹಗಲು ವೇಳೆಯಲ್ಲಿ ಕಾಣಿಸುವುದಿಲ್ಲ. ಹಗಲು ಕಾಣಿಸದಿದ್ದರೂ ನಕ್ಷತ್ರಗಳು ಎಲ್ಲ ವೇಳೆಗಳಲ್ಲೂ ಇರುತ್ತವೆ. ಶಾಶ್ವತವಾಗಿರುವ ನಕ್ಷತ್ರ ರಾತ್ರಿ ವೇಳೆಯಲ್ಲಿ ಕಾಣಿಸಿಕೊಂಡು ಹಗಲು ವೇಳೆಯಲ್ಲಿ ಕಾಣಿಸದಂತಿದೆ. ಪ್ರಪಂಚವಿರುವಾಗ ಇಲ್ಲದಿರುವಾಗ ನಾಶವಿಲ್ಲದೇ ಇರುವ ಪರಮಾತ್ಮನು ಹಗಲಾಗಲೀ ರಾತ್ರಿಯಾಗಲೀ ಚಿರಕಾಲವಿರುವ ನಕ್ಷತ್ರದೊಂದಿಗೆ ಪೂರ್ವದ ಹಿರಿಯರು ಹೋಲಿಸಿದ್ದಾರೆ. ಮೋಕ್ಷದ ಒಂದು ಗುರುತಿಗಾಗಿ ನಕ್ಷತ್ರವನ್ನಿರಿಸಿದ್ದಾರೆ. ಆದ್ದರಿಂದ ದೇವರಲ್ಲಿ ಐಕ್ಯರಾಗಿರೆಂದು, ದೇವರು ಇಂಥವನೆಂದು ನಕ್ಷತ್ರವನ್ನು ತೋರಿಸುವುದು ಇಂದೂ ಮತದಲ್ಲಿ ಮೊದಲ ಆಚಾರವಾಗಿದ್ದಿತು. ಕಾಲಕ್ರಮದಲ್ಲಿ ಹಿಂದೂಗಳು ಅದನ್ನು ಮರೆತು ಹೋಗಿದ್ದಾರೆ. ಕ್ರೈಸ್ತಮತದಲ್ಲಿ, ಮಹಮ್ಮದೀಯ ಮತದಲ್ಲಿ ನಕ್ಷತ್ರಕ್ಕೆ ಬೆಲೆ ಕೊಡುವುದು ಇಂದಿಗೂ ಇದೆ. ನಕ್ಷತ್ರ ಪರಮಾತ್ಮನ ಚಿಹ್ನೆ ಯಾದಾಗ ಅದನ್ನು ಹೇಗೆ ಸೇರಬೇಕೆಂಬ ಸಂಶಯ ಏರ್ಪಡದೇ ಇರದು. ಅದಕ್ಕೆ ಸಮಾಧಾನವೇ ನೆಂದರೆ! ಪರಮಾತ್ಮನನ್ನು ತಿಳಿಯಲು ಆತ್ಮ ಜ್ಞಾನದ ಅವಶ್ಯಕತೆ ಇದೆ. ಆತ್ಮ ಜ್ಞಾನವನ್ನು ಅರಿತ ನಂತರ ಪರಮಾತ್ಮ ತಿಳಿಯಬಲ್ಲನು.

# 39. ಚಂದ್ರ

ಬ್ರಹ್ಮವಿದ್ಯೆಯಲ್ಲಿ ಜ್ಞಾನದ ಚಿಹ್ನೆಯಾಗಿ ಚಂದ್ರನನ್ನು ಹೋಲಿಸುವುದು ಸಹಜವಾಗಿದೆ. **"ಚಾಂದ್ರ ಮಾಸಂ ಜ್ಯೋತಿ ಯೋಗಿ ಪ್ರಾಪ್ಯ ನಿವರ್ಥತೇ"**



**(ಚಂದ್ರ)**

ಕರ್ಮಶೇಷದಿಂದ ಪುನಃ ಜನಿಸುವ ಯೋಗಿ ಚಂದ್ರ ತೇಜಸ್ಸು ಉಂಟಾಗಿ ಹುಟ್ಟುತ್ತಾನೆ ಎಂದಿದ್ದಾರೆ. ಇಲ್ಲಿ ಚಂದ್ರ ತೇಜಸ್ಸೆಂದರೆ ಜ್ಞಾನಶಕ್ತಿ ಎಂದು ಅರ್ಥ. ಆದ್ದರಿಂದ ಜ್ಞಾನಶಕ್ತಿಗೆ ಬದಲಾಗಿ ಚಂದ್ರನನ್ನು ತೋರಿಸುವುದು ನಡೆಯುತ್ತಿದೆ. ದೇವರಲ್ಲಿ ಐಕ್ಯವಾಗಲು ಜ್ಞಾನಶಕ್ತಿ ಅವಶ್ಯವೆಂದು ತಿಳಿಸಲು ನಕ್ಷತ್ರವಿರಿಸಿ ಅದರ ಕೆಳಗೆ ಬಾಗಿರುವ ಚಂದ್ರನನ್ನು ಇಟ್ಟಿದ್ದಾರೆ.

ಪೂರ್ಣ ಚಂದ್ರನಲ್ಲದೆ ಬೆಳೆಯುತ್ತಿರುವ ಚಂದ್ರನಾದ ಅರ್ಧ ಚಂದ್ರನನ್ನು ತೋರಿಸಿದ್ದಾರೆ. ಇದಕ್ಕೆ ಅರ್ಥ ಜ್ಞಾನಶಕ್ತಿ ಬೆಳೆದಂತೆ ಮೋಕ್ಷ ಲಭಿಸುವುದೆಂದು ತಿಳಿಯಬೇಕು. ಮೋಕ್ಷ ಸಂಬಂಧವಾದ, ನಕ್ಷತ್ರ ಜ್ಞಾನ ಸಂಬಂಧವಾದ ಚಂದ್ರನನ್ನು ಪೂರ್ವದಲ್ಲಿ ಎಲ್ಲರೂ ಗೌರವಿಸಿ ಬೆಲೆ ಕೊಟ್ಟು ನೋಡುತ್ತಿದ್ದರು. ಈಗ ಅದು ಒಂದು ಮಹಮ್ಮದೀಯ ಮತಕ್ಕೇ ಪರಿಮಿತವಾಗಿದೆ. ಆದರೂ ನಕ್ಷತ್ರದ ಒಂದು ಅಂತರಾರ್ಥ ಅವರಿಗೆ ಎಷ್ಟರಮಟ್ಟಿಗೆ ತಿಳಿದಿದೆಯೋ ನಮಗೆ ತಿಳಿದಿಲ್ಲ.

# 40. ರೆಕ್ಕೆಗಳ ಕುದುರೆ

ಮೋಕ್ಷ ತಿಳಿಯಲು ಜ್ಞಾನಶಕ್ತಿ ಅಗತ್ಯವೆಂದಿದ್ದೇವೆ. ಜ್ಞಾನಶಕ್ತಿ ಲಭಿಸಬೇಕೆಂದರೆ ಯೋಗವನ್ನಾಚರಿಸಬೇಕು. ಯೋಗವೆಂದರೆ! ಮನಸ್ಸು ಚಲಿಸದೆ ನಿಂತುಹೋಗಬೇಕು. ಮನಸ್ಸು ಚಂಚಲವಾದುದು. ಅದು ಎಷ್ಟೋ ವೇಗದಿಂದ ಚಲಿಸುತ್ತಿರುತ್ತದೆ. ವಾಯು ವೇಗವಾದ, ಚಂಚಲವಾದ ಮನಸ್ಸನ್ನು ನಿಲ್ಲಿಸಲು ಸಾಧನೆ ಅಗತ್ಯ. ಈ ವಿಧವಾಗಿ ಮಾಡಿದರೆ ಮೋಕ್ಷವು ಲಭಿಸುತ್ತದೆಂದು ನಕ್ಷತ್ರವನ್ನು, ಅರ್ಧ ಚಂದ್ರನನ್ನು ತೋರಿಸಿದ ಹಿರಿಯರು ರೆಕ್ಕೆಗಳಿರುವ ಕುದುರೆಯನ್ನು ತೋರಿಸಿದ್ದಾರೆ. ಇದಕ್ಕೆ ಅರ್ಥವೇನೆಂದರೆ! ಕುದುರೆ ಓಡುತ್ತದೆ. ಅದರಲ್ಲಿಯೂ ರೆಕ್ಕೆಗಳ ಕುದುರೆ ಎಂದರೆ ವಾಯು ವೇಗಕ್ಕಿಂತಲೂ ಹೆಚ್ಚು ವೇಗ ಇರುವುದೆಂದು ಅರ್ಥ. ನಿನ್ನಲ್ಲಿನ ಮನಸ್ಸು ಇಂತಹುದೆಂದು ತಿಳಿಸುವ

ಸಲುವಾಗಿ ರೆಕ್ಕೆಗಳ ಕುದುರೆಯನ್ನು ತೋರಿಸಿದ್ದಾರೆ. ಸಾಂಖ್ಯಾ ಸೂತ್ರದ ಪ್ರಕಾರ ಆಕಾಶ ಒಂದನೆಯು ಭಾಗ, ಗಾಳಿ ಒಂದನೆಯು ಭಾಗ ಬೆರೆತಾಗ ತಯಾರಾಗಿರುವುದು ಮನಸ್ಸು. ಆದ್ದರಿಂದ ಆಕಾಶದಲ್ಲಿ ಗಾಳಿಯಲ್ಲಿ ಹಾರುವ ರೆಕ್ಕೆಗಳ ಕುದುರೆಯನ್ನು ಮನಸ್ಸಾಗಿ ತೋರಿಸಿದ್ದಾರೆ. ಮನಸ್ಸು ನಿಲ್ಲಬೇಕೆಂದರೆ ಶರೀರದೊಳಗಿನ ಪಂಚ ಜ್ಞಾನೇಂದ್ರಿಯ ಗಳ ಯಾವ ವಿಷಯವೂ ಜ್ಞಾಪಕಕ್ಕೆ ಬಾರದೇ ನಿಂತುಹೋದಾಗ ಮನಸ್ಸು ನಿಂತುಹೋಗುತ್ತದೆ. ಜ್ಞಾನೇಂದ್ರಿಯಗಳ ವಿಷಯಗಳ ಮೇಲೆಯೇ ಮನಸ್ಸು ಚಲಿಸುತ್ತಿರುತ್ತದೆ. ಆದ್ದರಿಂದ ಚಂಚಲವಾದ ಮನಸ್ಸು ನಿಲ್ಲಿಸಬೇಕೆಂದರೆ ಐದು ಜ್ಞಾನೇಂದ್ರಿಯಗಳ ಗಮನವೂ ನಿಂತು ಹೋಗಬೇಕು. ಆದ್ದರಿಂದ ಮನಸ್ಸನ್ನು ರೆಕ್ಕೆಗಳ ಕುದುರೆಯನ್ನಾಗಿ ತೋರಿಸಿ ಈ ಕುದುರೆ ನಿಂತು ಹೋಗಬೇಕೆಂದರೆ ಐದು ಜ್ಞಾನೇಂದ್ರಿಯಗಳು ನಿಂತು ಹೋಗಬೇಕೆಂದು ಐದು ಬೆರಳುಗಳಿರುವ ಹಸ್ತವನ್ನು ಕುದುರೆಗೆ ಮೇಲ್ಭಾಗದಲ್ಲಿ ತೋರಿಸಿದ್ದಾರೆ.



**(ರೆಕ್ಕೆಗಳ ಕುದುರೆ)**

ಐದು ಬೆರಳುಗಳು ಕೂಡಿಸಿದ ಹಸ್ತವನ್ನು ನಿಲ್ಲಿಸೆಂದು ಎಚ್ಚರಿಸುವಂತೆ ಕಾಣಿಸುತ್ತಿದೆ. ಹಸ್ತದಲ್ಲಿನ ಜ್ಞಾನೇಂದ್ರಿಯಗಳ ಗಮನ ನಿಂತರೆ, ಚಂಚಲವಾದ ಮನಸ್ಸೆಂಬ ರೆಕ್ಕೆಗಳ ಕುದುರೆ ನಿಲ್ಲುವುದೆಂದು ತೋರಿಸಿದ್ದಾರೆ. ರೆಕ್ಕೆಗಳ ಕುದುರೆಯಾದ ಮನಸ್ಸು ನಿಲ್ಲುವುದರಿಂದ ಜ್ಞಾನಶಕ್ತಿ ಬೆಳೆಯುವುದೆಂದು ಮೇಲೆ ಅರ್ಧಚಂದ್ರನನ್ನು ತೋರಿಸಿದ್ದಾರೆ. ಜ್ಞಾನಶಕ್ತಿ ಬೆಳೆದರೆ ಮೋಕ್ಷ ಲಭಿಸುವುದೆಂದು ನಕ್ಷತ್ರವನ್ನು ಸಹ ತೋರಿಸಿದ್ದಾರೆ. ನಕ್ಷತ್ರ, ಅರ್ಧಚಂದ್ರ, ಹಸ್ತ, ರೆಕ್ಕೆಗಳ ಕುದುರೆ ಎಲ್ಲಾ ಗುರುತುಗಳು ಒಂದು ಚಿತ್ರದಲ್ಲಿಯೇ ನೋಡಬಹುದು. ಕೆಲವು ಸ್ಥಳಗಳಲ್ಲಿ ರೆಕ್ಕೆಗಳ ಕುದುರೆ, ಹಸ್ತ ಒಂದು ಚಿತ್ರವಾಗಿ, ನಕ್ಷತ್ರ ಅರ್ಧ ಚಂದ್ರ ಒಂದು ಚಿತ್ರವಾಗಿವೆ. ಅಂತರಾರ್ಥವಾಗಿ ಎಷ್ಟೋ ಜ್ಞಾನ ತುಂಬಿದ್ದರೂ ಈ ಚಿತ್ರಗಳ ವಿಷಯ ತುಂಬ ಜನರಿಗೆ ತಿಳಿದಿಲ್ಲ ಎಂದೇ ಹೇಳಬಹುದು. ಆತ್ಮ ಜ್ಞಾನ ತುಂಬಿಕೊಂಡಿರುವ ಚಿಹ್ನೆಗಳಾದ ಈ ಗುರುತುಗಳನ್ನು ಎಲ್ಲರೂ ಗೌರವಿಸಬೇಕು.

# 41. ಪೀರ್ಲ ಹಬ್ಬ

ಇಂದೂಗಳ ಹಬ್ಬಗಳಲ್ಲಿ ಪೀರ್ಲು ಹಬ್ಬವೂ ಸಹ ಸೇರಿಕೊಂಡಿದೆ. ಇಂದೂ ದೇಶವನ್ನು ಹಿಂದೂ ದೇಶವೆಂದು ಕರೆಯಲ್ಪಡುವಂತೆ ಇಂದೂಗಳ ಆರಾಧನೆಗಳು ಸಹ ಕೆಲವು ಇತರೆ ಮತಗಳಲ್ಲಿ ಬೆರೆತು ಹೋಗಿವೆ. ಇತರೆ ಮತವೇ ಇಲ್ಲದ ಇಂದೂ ದೇಶದಲ್ಲಿ ಪರಮಾತ್ಮನ ಆರಾಧನೆಗಳು ಬಹಳ ಇದ್ದವು. ಅಂತಹವುಗಳು ಕೆಲವು ಕಾಲಗರ್ಭದಲ್ಲಿ ಬೆರೆತುಹೋಗಿ ಕೆಲವು ಮಾತ್ರ ಉಳಿದುಕೊಂಡಿವೆ. ಅಂತಹವುಗಳಲ್ಲಿ ಕೆಲವು ಅರ್ಥ ತಿಳಿಯದ ಆಚಾರವಾಗಿದ್ದರೆ ಕೆಲವು ಪರಮತಗಳಲ್ಲಿ ಸಿಲುಕಿಕೊಂಡಿವೆ. ಅಂತಹವುಗಳಲ್ಲಿ ರೆಕ್ಕೆಗಳ ಕುದುರೆ, ನಕ್ಷತ್ರ, ಚಂದ್ರ, ಪೀರ್ಲು ಆಗಿರಲು, ಪೀರ್ಲು ಮಾತ್ರ ಆಚೆಗೂ ಇಲ್ಲದೆ ಈಚೆಗೂ ಇಲ್ಲದೆ ಹಿಂದೂಗಳಲ್ಲಿ ಅರ್ಧ ಮುಸ್ಲಿಮರಲ್ಲಿ ಅರ್ಧ ಸಿಲುಕಿಕೊಂಡಿದೆ. ಅತಿ ಮುಖ್ಯವಾದ ಚಂದ್ರ, ನಕ್ಷತ್ರ, ರೆಕ್ಕೆಗಳ ಕುದುರೆ ಮೊದಲಿಂದ

ಹಿಂದೂಗಳಲ್ಲಿ ಇದ್ದವುಗಳೇ ಎಂಬ ಆಧಾರಗಳು ಮೇಲ್ನೋಟಕ್ಕೆ ಕಾಣಿಸದೆ ಇದ್ದರೂ ಪಿರ್ಲು ಮಾತ್ರ ಹಿಂದೂಗಳೊಂದಿಗೆ ಈಗಲೂ ಸಂಬಂಧವಿದ್ದು ವಿಶೇಷವಾಗಿ ಹಿಂದೂಗಳೇ ಪಾಲ್ಗೊಳ್ಳುತ್ತಿರುವುದು ಗಮನಾರ್ಹವಾಗಿದೆ. ಯಾರಿಗೆ ತಿಳಿದರೂ, ತಿಳಿಯದಿದ್ದರೂ ಚಂದ್ರ ನಕ್ಷತ್ರವನ್ನು ಕುರಿತು, ರೆಕ್ಕೆಗಳ ಕುದುರೆಯನ್ನು ಕುರಿತು ನಾವು ತಿಳಿದುಕೊಂಡಿದ್ದೇವೆ. ಈಗ ಪೀರ್ಲನ್ನು ಕುರಿತು ತಿಳಿದುಕೊಳ್ಳೋಣ.

ಇಂದೂ ಮತದಲ್ಲಿ ಶಾಸ್ತ್ರಗಳಲ್ಲದೆ ಪುರಾಣಗಳು ಸಹ ಇದ್ದಂತೆ ಮುಸ್ಲಿಂ ಮತದಲ್ಲಿಯೂ ಸಹ ಚಂದ್ರ, ನಕ್ಷತ್ರವನ್ನು ಕುರಿತು ರೆಕ್ಕೆಗಳ ಕುದುರೆಯನ್ನು ಕುರಿತು ಪೀರ್ಲನ್ನು ಕುರಿತು ಕೆಲವು ಕಥೆಗಳು ಇರಬಹುದು. ಆದರೂ ದೇವರಿಗೆ ಸನ್ನಿಹಿತವಾಗಿ ನಾವು ಅವುಗಳ ಅರ್ಥಗಳನ್ನು ಹೇಳಿಕೊಳ್ಳುವುದರಲ್ಲಿ ತಪ್ಪಿಲ್ಲ. ತಗಡಿನಿಂದ ತಯಾರು ಮಾಡಿದ ದುಂಡಾದ ಭಾಗವು ಪೀರ್ಲು ಆಗಿರುತ್ತದೆ. ಆ ದುಂಡಾದ ಭಾಗಕ್ಕೆ ಮೇಲೆ ಮೂರು ಕೊಂಬುಗಳಾಗಿ ತಗಡುಗಳನ್ನು ಅಳವಡಿಸಿರುತ್ತಾರೆ. ಮೂಗು, ಬಾಯಿ ಆಕಾರವಿಲ್ಲದ ದುಂಡಾದ ಆಕಾರಕ್ಕೆ ಮುಖ್ಯ ಅಲಂಕಾರಗಳಾಗಿ ಮೇಲೆ ಮೂರು ತಗಡುಗಳು ನಾಮಗಳಂತೆ ತಯಾರು ಮಾಡಿರುತ್ತಾರೆ. ಮೂಗು, ಮುಖ ಎಂದು ಗುರುತಿಲ್ಲದ ಆಕಾರವನ್ನು ಆತ್ಮ ಸ್ವರೂಪವಾಗಿ ಅರ್ಥಮಾಡಿಕೊಳ್ಳಬೇಕು. ಹಾಗೆ ತೋರಿಸುವುದರಲ್ಲಿ ಮುಖ್ಯ ಉದ್ದೇಶ ದೇವರಿಗೆ ಆಕಾರವಿಲ್ಲವೆಂದು ತಿಳಿಸುವುದೇ ಆಗಿದೆ. ಆಕಾರವಿಲ್ಲದ ದೇವರು ಪ್ರಪಂಚದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮರಾಗಿ ಮೂರು ಭಾಗಗಳಾಗಿ ನಿಂತಿವೆ ಎಂದು ತಿಳಿಸುವುದೇ ಮೇಲಿನ ಮೂರು ಉದ್ದನೆಯ ತಗಡುಗಳ ಗುರುತಾಗಿದೆ. ಮುಖ್ಯವಾಗಿ ಕಾಣಿಸುತ್ತಿರುವ ಮೂರು ತಗಡುಗಳಲ್ಲಿ ಪಕ್ಕದಲ್ಲಿ ಎರಡೂ ಚಿಕ್ಕವುಗಳಾಗಿಯೂ, ಮಧ್ಯದೊಳಗಿನದು ದೊಡ್ಡದಾಗಿರುತ್ತದೆ. ಹಾಗೆಯೇ ಪಕ್ಕದಲ್ಲಿರುವ ತಗಡುಗಳು ಎರಡು ಕಡೆಗಳಿಗೂ ಬಾಗಿರುವಂತೆ ಮಧ್ಯದೊಳಗಿನದು ಬಾಗದೇ ನೇರವಾಗಿರುವಂತೆ ಕಾಣಿಸುತ್ತಿರುತ್ತದೆ. ಯಾವ ಕಡೆ ತಿರುಗಿದರೂ ಯಾವ ಪೀರ್ಲಗಾದರೂ ಪಕ್ಕದವುಗಳಿಗಿಂತ ಮಧ್ಯದಲ್ಲಿರುವುದು ಪ್ರತ್ಯೇಕವಾಗಿ ಇರುವಂತೆ ತಯಾರುಮಾಡಿರುತ್ತಾರೆ. ನೋಡುವವರಿಗೆ ಬಲಗಡೆಗೆ ಕಾಣಿಸುವ

ತಗಡು ಜೀವಾತ್ಮನೆಂದು, ಎಡಗಡೆಗೆ ಕಾಣಿಸುವ ತಗಡು ಆತ್ಮನೆಂದು ಗುರುತಿಸಿಕೊಳ್ಳಬೇಕು. ಹಾಗೆಯೇ ಮಧ್ಯದಲ್ಲಿರುವ ತಗಡು ಪರಮಾತ್ಮನೆಂದು ಗುರುತಿಸಿಕೊಳ್ಳಬೇಕು. ಭೂಮಿಯ ಮೇಲೆ ಪರಮಾತ್ಮನು ಕ್ಷರಾಕ್ಷರ ಪುರುಷೋತ್ತಮರಾಗಿ ಇದ್ದಾನೆಂದು ಎಲ್ಲದಕ್ಕೂ ಆದಿಕರ್ತನಾಗಿ ಇಂದೂಗಳಿಂದ ಪರಮಾತ್ಮನಾಗಿಯೂ, ಕ್ರೈಸ್ತರಿಂದ ಎಹೋವನಾಗಿಯೂ, ಮುಸ್ಲಿಮರಿಂದ ಅಲ್ಲಾನೆಂದು ಕರೆಯಲ್ಪಡುವವನಿಂದ ಒಂದು ಪಕ್ಕದಲ್ಲಿ ಜೀವಾತ್ಮ ಮತ್ತೊಂದು ಪಕ್ಕದಲ್ಲಿ ಆತ್ಮಹುಟ್ಟಿ ಪ್ರಪಂಚದಲ್ಲಿ ಜೀವಕೋಟಿ ತಯಾರಾಗಿದೆಯೆಂದು ತೋರಿಸುವ ಗುರುತೇ ಪೀರ್ಲು ಒಂದರ ಆಕಾರವಾಗಿದೆ.

ದೇವರು ಇಂತಹವನೆಂದು ತಿಳಿದ ಹಿರಿಯರು ಪ್ರಜೆಗಳಿಗೆ ತಿಳಿಯ ಪಡಿಸಲು ಎಷ್ಟೋ ವಿಧಾನಗಳನ್ನು ಮಾಡಿದ್ದಾರೆ ಅಂತಹವರ ಉದ್ದೇಶಗಳಲ್ಲಿ ಪೀರ್ಲು ಸಹ ಒಂದು ಮುಖ್ಯ ಉದ್ದೇಶವಾಗಿದೆ. ವರ್ಷಕ್ಕೊಂದು ಸಲ ಪೀರ್ಲುಗಳನ್ನು ಊರಿನಲ್ಲಿ ಮೆರವಣಿಗೆ ಮಾಡುವುದು, ಅಲಂಕರಿಸುವುದು, ಆರಾಧಿಸುವುದು ಉತ್ಸವಗಳನ್ನು ಮಾಡುವುದು ನಡೆಯುತ್ತಿದೆ. ಆದರೆ ಪೂರ್ವದಲ್ಲಿ ದೊಡ್ಡವರಿರಿಸಿದ ಭಾವನೆ ಯಾವ ವಿಧದಿಂದಲೂ ತಿಳಿಯದೇ ಹೋಗಿದೆ. ಇಂದು ಪೀರ್ಲುಗಳ ಮೆರವಣಿಗೆ ಇಂದೂಗಳು, ಮುಸ್ಲಿಮರು ಸೇರಿ ಮಾಡುತ್ತಿದ್ದಾರೆ. ಇದೊಂದು ವಿಶಿಷ್ಟ ರೀತಿಯಲ್ಲಿ ಮಾಡುತ್ತಿದ್ದಾರೆ. ಪೂರ್ವದಲ್ಲಿನ ಭಾವನೆಯು ಸ್ವಲ್ಪವಾದರೂ ಕಾಣಿಸದೆ ಹೋಗಿರುವುದರಿಂದ ಪೀರ್ಲುಗಳನ್ನು ಸಹ ಕೋರಿಕೆಗಳನ್ನು ಕೋರುವ ಮನುಷ್ಯರು ತಯಾರಾಗಿದ್ದಾರೆ. ಪೀರ್ಲು ಬಳಿ ಭಕ್ತಿಭಾವ ಕೆಲವರಿಗೆ ಮಾತ್ರ ಇದ್ದರೆ, ಹೆಚ್ಚು ಜನರು ಮತ್ತಿನ ಪಾನೀಯಗಳನ್ನು ಕುಡಿದು ಕುಣಿಯುವವರೇ ಬಹಳ ಜನ ಕಾಣಿಸುತ್ತಿದ್ದಾರೆ. ಪೀರ್ಲುಗಳನ್ನು ದೇವರೆಂದು ತಿಳಿದು ಅವುಗಳ ಮುಂದೆ ನಮ್ಮ ಕರ್ಮವನ್ನೆಲ್ಲ ಇಲ್ಲದಂತೆ ಮಾಡಿಕೊಳ್ಳುತ್ತೇವೆಂಬ ಭಾವನೆಯಿಂದ ಪೂರ್ವದ ಹಿರಿಯರು ಅಗ್ನಿ ಕುಂಡವನ್ನು ಕಾಯಿಸಿ ಅದರಲ್ಲಿ ಕಟ್ಟಿಗೆಗಳನ್ನು ಹಾಕಿ ಸುಟ್ಟು ತೋರಿಸುತ್ತಿದ್ದರು. ಶರೀರವೆಂಬ ಕುಂಡದಲ್ಲಿ ಜ್ಞಾನವೆಂಬ ಅಗ್ನಿಯಿಂದ ಕರ್ಮಗಳೆಂಬ ಕಟ್ಟಿಗೆಗಳನ್ನು ಸುಟ್ಟು ನಿನ್ನೊಳಗೆ ಐಕ್ಯವಾಗುವೆವೆಂದು




**ಪೀರು**

ತೋರಿಸಿರುವ ಅಂದಿನ ಕ್ರಿಯೆ ಇಂದಿಗೂ ಇದ್ದರೂ ಕಟ್ಟಿಗೆಗಳನ್ನು ಕರ್ಮಗಳೆಂದು ಅಗ್ನಿಯನ್ನು ಜ್ಞಾನವೆಂದು ಕುಂಡವನ್ನು ಶರೀರವೆಂದು ಪೀರ್ಲನ್ನು ದೈವವೆಂದು ಗುರುತಿಸುವವರು ವಿರಳವಾಗಿದ್ದಾರೆ. ಪೀರ್ಲ ಹಬ್ಬ ಅಥವಾ ಮೊಹರಂ ಹಬ್ಬ ಸಾರಾಯಿ ಕುಡಿಯುವುದಕ್ಕೂ, ಮಾಂಸ ತಿನ್ನುವುದಕ್ಕೂ ಪ್ರತೀಕವಾಗಿದೆ. ಇಂದಿನ ಹುಡುಗಾಟದ ಪದ್ಧತಿಯನ್ನು ಬಿಟ್ಟು ಪೂರ್ವದ ಜ್ಞಾನಿಗಳ ಪದ್ಧತಿಯನ್ನು ಅಳವಡಿಸಿಕೊಂಡರೆ ಪೀರ್ಲ ಹಬ್ಬಕ್ಕೆ ಪವಿತ್ರತೆ ಕೈಗೂಡುತ್ತದೆ.

ಅಜ್ಞಾನದಲ್ಲಿರುವ ಮನುಜರಿಗೆ ಆತ್ಮಜ್ಞಾನ ತಿಳಿಸುವ ಉದ್ದೇಶದಿಂದ ಪೂರ್ವದಲ್ಲಿ ಹಿರಿಯರು ಎಷ್ಟೋ ಕೃಷಿ ಮಾಡಿದ್ದಾರೆ. ಆದರೂ ಅವರ ಕೃಷಿಗೆ ಈ ಕಾಲದಲ್ಲಿ ಬೆಲೆ ಇಲ್ಲದಂತೆ ಹೋಗಿದೆ. ಮಾನವರ ಕುಲ ಮತ ವ್ಯವಸ್ಥೆಗಳು ಅತ್ಮ ಜ್ಞಾನವನ್ನು ಕಾಡಿಗೆ ಅಟ್ಟಿವೆ. ಅಜ್ಞಾನ ಮಾನವರಲ್ಲಿ ಒಡಕುಗಳನ್ನು ಏರ್ಪಡಿಸಿ ಕುಲಮತಗಳೆಂಬ ಹೆಸರುಗಳಿಂದ ವಾದಿಸಿಕೊಳ್ಳುವ ಸ್ಥಿತಿಗೆ ಕೆಳ ಮಟ್ಟಕ್ಕೆ ಇಳಿಜಾರಿಸಿದೆ. ಸರ್ವ ಮಾನವರಿಗೂ ದೇವರು ಒಬ್ಬನೇ ಎಂಬ

ವಿಷಯವನ್ನು ಇಂದಿನ ಮಾನವರು ಪೂರ್ತಿಯಾಗಿ ಮರೆತು ಹೋಗಿದ್ದಾರೆ. ಅಂತಹವರಿಗೆ ಒಂದು ಎಚ್ಚರಿಕೆ ಕೊಡಲು ಅಜ್ಞಾನ ನಿದ್ರೆಯಿಂದ ಮೇಲೇಳಿಸಬೇಕೆಂಬ ಯೋಚನೆಯೇ ಈ ಚಿಕ್ಕ ಗ್ರಂಥದ ಪ್ರಯತ್ನ. ಮಾನವನ ಜಾತಿಯಲ್ಲಿ ಮತದ ಒಡಕುಗಳು ಇಲ್ಲದಂತೆ ಮಾಡಬೇಕೆಂಬ ಉದ್ದೇಶವೇ ಈ ಗ್ರಂಥದ ಪ್ರಯತ್ನ. ಎಲ್ಲಾ ಮತಗಳಿಗೂ ಆಧಾರವಾದ ರೂಪ ಹೆಸರಿಲ್ಲದವನನ್ನು ಕುರಿತು ತಿಳಿಸುವುದೇ ನಮ್ಮ ಉದ್ದೇಶ. ನನಗೇನೂ ತಿಳಿಯದಿದ್ದರೂ ಯೋಚನೆಗೆ ಒದಗಿಸಿಕೊಟ್ಟು ಶರೀರದ ಮುಖಾಂತರ ಬರೆಯಿಸಿದ ದೇವ ದೇವನಾದ ಪರಮಾತ್ಮನಿಗೇ ಈ ಗ್ರಂಥದ ಕೀರ್ತಿ ಅಪಕೀರ್ತಿಗಳು ಸಲ್ಲಬೇಕೆಂದು ತಿಳಿಸುತ್ತಿದ್ದೇವೆ.

# ದೇವಾಲಯಗಳ ಬಗ್ಗೆ ಸ್ವಾಮಿಗಳ ಅಭಿಪ್ರಾಯಗಳು

ದೇವಾಲಯಗಳು ಮಾನವನಿಗೆ ದೈವತ್ವವನ್ನು ಕುರಿತು ಸಮಾಚಾರವನ್ನು ಒದಗಿಸುವ ಜ್ಞಾನಸೇತುವೆಗಳಾದರೆ, ಅದರಲ್ಲಿನ ಪೂಜೆಗಳು ದೇವರಿಗೆ ಮಾನವತ್ವ ವಿಶ್ವಾಸವನ್ನು ಕುರಿತು ಸಮಾಚಾರ ಕೊಡುವ ಸೂಚನೆಗಳಾಗಿವೆ ಎಂದು ತಿಳಿದುಕೊಂಡಿದ್ದೇವೆ. ದೇವಾಲಯಗಳು ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯನ್ನು ದಾಟದಂತೆ ಅದರ ಹದ್ದಿನಲ್ಲಿಯೇ ತಯಾರು ಮಾಡಲ್ಪಟ್ಟಿವೆ. ಆದಿಯಲ್ಲಿ ಪರಮಾತ್ಮ ಸೂರ್ಯನಿಗೆ ಹೇಳಿದ ಜ್ಞಾನದ ಪ್ರಕಾರ ದೇವಾಲಯಗಳು ಕೃತಯುಗದಲ್ಲಿಯೇ ನಿರ್ಮಿಸಿದ್ದಾರೆ. ಆಗ ಯಾವ ಆಗಮ ಶಾಸ್ತ್ರವು ಇಲ್ಲ. 1) ಗಣಿತ ಶಾಸ್ತ್ರ, 2) ಜ್ಯೋತಿಷ್ಯ ಶಾಸ್ತ್ರ, 3) ಖಗೋಳ ಶಾಸ್ತ್ರ, 4) ಭೌತ ಶಾಸ್ತ್ರ, 5) ರಾಸಾಯನಿಕ ಶಾಸ್ತ್ರಗಳು ಪ್ರಪಂಚಕ್ಕೆ ಸಂಬಂಧಿಸಿದವುಗಳಾಗಿರಲು, 6ನೆಯ ಶಾಸ್ತ್ರವಾದ ಯೋಗ ಶಾಸ್ತ್ರವು ಅಥವಾ ಬ್ರಹ್ಮವಿದ್ಯಾ ಶಾಸ್ತ್ರವು ದೇವರಿಗೆ ಸಂಬಂಧಿಸಿದ ಶಾಸ್ತ್ರ. ವೇದಗಳು ಸಹ ಶಾಸ್ತ್ರಗಳಲ್ಲ. ದೇವರು, ದೇವಾಲಯಗಳು ವೇದಗಳಿಗೆ ಅತೀತವಾದವುಗಳು. ಅಂತಹ ದೇವಾಲಯಗಳಲ್ಲಿ ಧರ್ಮ ಬದ್ಧವಲ್ಲದ ಕಟ್ಟಡವಾಗಲಿ, ಧರ್ಮಯುತವಾಗದ ಆರಾಧನೆಗಳಾಗಲಿ ಅರ್ಥ

ರಹಿತವಾಗುತ್ತವೆ. ಯಾವಾಗ ನಿರ್ಮಿಸಿದ ದೇವಾಲಯಗಳಾದರೂ ಪೂರ್ವದ ಸಂಪ್ರದಾಯವನ್ನೇ ಹೊಂದಿರಬೇಕು. ಈ ಮಧ್ಯಕಾಲದಲ್ಲಿ ಕಲಿಯುಗದಲ್ಲಿ ಅವತರಿಸಿರುವ ಸ್ವಾಮಿಗಳು ದೇವಾಲಯಗಳ ಮೇಲೆ ತಮ್ಮ ಆದಿಪತ್ಯವನ್ನು ವಿಸ್ತರಿಸಿಕೊಳ್ಳಲು ವೈಷ್ಣವ ದೇವಾಲಯಗಳೆಂದು, ಶೈವ ದೇವಾಲಯಗಳೆಂದು ವಿಭಜಿಸಿದ್ದಾರೆ. ಗೃಹಗಳಿಗೆ ವಾಸ್ತು ಶಾಸ್ತ್ರವನ್ನು ಕೆಲವರು ಸೃಷ್ಟಿಸಿರುವಂತೆ, ದೇವಾಲಯಗಳಿಗೆ ಆಗಮ ಶಾಸ್ತ್ರವನ್ನು ಕೆಲವರು ಸೃಷ್ಟಿ ಮಾಡಿ, ದೇವರನ್ನು ಸಹ ಮನುಷ್ಯನಂತೆ ಲೆಕ್ಕಿಸಿ ಆತನಿಗೆ ನಿದ್ರೆ ಇದೆ ಎಂದು ಪವಳಿಸುವ ಸೇವೆ ಮಾಡಬೇಕೆಂದು ಹೇಳುತ್ತಿದ್ದಾರೆ. ಈ ವಿಧವಾಗಿ ಎಷ್ಟೋ ನಿಯಮಗಳನ್ನು ಕಲ್ಪಿಸಿ ಪರಮತಗಳ ಮುಂದೆ ದೇವರನ್ನು ಕೆಳಮಟ್ಟಕ್ಕೀಡು ಮಾಡಿದ್ದಾರೆ.

ಈ ಸಂದರ್ಭದಲ್ಲಿ ವೈಷ್ಣವರಾದ ಚಿನಜಿಯರ್ ಸ್ವಾಮಿಗಳು ತಿರುಮಲ ದಲ್ಲಿ ಹೆಲಿಕ್ಯಾಪ್ಟರ್‌ಗಳು ತಿರುಗಬಾರದೆಂದು, ಗ್ಯಾಸ್ ಒಲೆಯ ಮೇಲೆ ಲಾಡನ್ನು ಮಾಡಬಾರದೆಂದು, ಪೈಪ್‌ಗಳಲ್ಲಿ ಬರುವ ನೀರನ್ನು ಬಳಸಬಾರದೆಂದು ಹೇಳಿರುವುದು, ಹೊಸಪ್ರಾಂಗಣದ ಕಟ್ಟಡ ಸಂಪ್ರದಾಯ ವಿರುದ್ಧವೆಂದು ಹೇಳುವುದು, ಧರ್ಮಪ್ರಚಾರಕ್ಕೆ ದೇವಸ್ಥಾನದ ಹಣಬೇಕೆಂದು ಕೋರುವುದು ನಡೆದಿದೆ. ಈ ವಿಷಯಗಳಲ್ಲಿ ಶೈವರಾದ ಜಯೇಂದ್ರ ಸರಸ್ವತಿ ಸ್ವಾಮಿಗಳು ವಿಭೇದಿಸಿರುವುದು, ಪತ್ರಿಕೆಯ ಮುಖಾಂತರ ವಿಮರ್ಶಿಸಿಕೊಳ್ಳುವುದು ನಡೆದಿದೆ. ಜಯೇಂದ್ರ ಸರಸ್ವತಿಯವರ ವ್ಯಾಖ್ಯಾನಗಳಿಗೆ ಚಿನಜಿಯರ್ ಸ್ವಾಮಿಗಳು ಸ್ಪಂದಿಸಿ ಶಾಸ್ತ್ರಾವಗಾಹನೆ ಇಲ್ಲದವರು ಮಾತನಾಡಬಾರದೆಂದು, ತಾನು ಸರ್ವಜ್ಞನೆಂದು, ಸಂಪ್ರದಾಯಗಳು ತಿಳಿಯದವರು ಪ್ರಕಟಣೆ ಮಾಡಬಾರದೆಂದು ಹೇಳಿರುವುದು ನಡೆದಿದೆ. ಅಷ್ಟೇ ಅಲ್ಲದೆ ಪೀಠ ಹಾಕಿಕೊಂಡು ಕುಳಿತಿರುವವರೆಲ್ಲರೂ ಪೀಠಾಧಿಪತಿಗಳಾಗುತ್ತಾರಾ ಎಂದು ಪೀಠಾಧಿಪತಿಗಳನ್ನು ಅವಹೇಳನವಾಗಿ ಮಾತನಾಡುವುದು ನಡೆದಿದೆ.

ಈ ಮಾತುಗಳನ್ನೆಲ್ಲಾ ಕೇಳಿದ ನಂತರ ಧರ್ಮ ವಿವರಣೆಗಾಗಿ ನಾವು ಬಾಯಿಬಿಡಬೇಕಾಗಿ ಬಂದಿದೆ. ದೇವಾಲಯಗಳಲ್ಲಿ ಪೂರ್ವದಲ್ಲಿದ್ದ ಸಂಪ್ರದಾಯ

ಗಳು ಇಲ್ಲದಂತಾಗಿ, ಭಕ್ತರಲ್ಲಿ ಆರಾಧನೆಯ ವಿಧಾನ ಬದಲಾಗಿ ಹೋಗುವುದಕ್ಕೆ ಇಂತಹ ಸ್ವಾಮೀಜಿಗಳೇ ಕಾರಣವೆಂದು ಹೇಳುವುದು ತಪ್ಪಲಿಲ್ಲ. ಧರ್ಮವೆಂದರೆ ಏನೆಂಬುದನ್ನು ತಿಳಿಯದೆ ಹೋದರೂ ನಾವೇ ಸರ್ವಜ್ಞರೆಂದು ತಿಳಿದು ಆಲಯ ಸಂಪ್ರದಾಯಗಳನ್ನು ಬೆಂಕಿಯಲ್ಲಿ ಹಾಕಿ, ದೇವರನ್ನು ಸಹ ಸಂಕುಚಿತ ಮಾಡಿ, ನಮ್ಮಂತೆಯೇ ಆತನಿಗೂ ನಿದ್ರೆ ಬೇಕೆನ್ನುವುದು, ಆಗಮ ಶಾಸ್ತ್ರಕ್ಕೆ ಗಂಟು ಹಾಕುವುದು ಸಮಂಜಸವಾಗಿದೆಯೇ ಎಂದು ಕೇಳುತ್ತಿದ್ದೇವೆ.

ಆಲಯದಲ್ಲಿ ಎಷ್ಟೋ ಅರ್ಥಗಳು ತುಂಬಿರುವಾಗ ಒಂದು ವಿವರವನ್ನಾಗಲಿ ಪ್ರಜೆಗಳಿಗೆ ತಿಳಿಸದಂತೆ ನಾವು ಧರ್ಮಪ್ರಚಾರಕರೆಂದರೆ ಸರಿ ಹೋಗುತ್ತದಾ? ಭಗವಂತನ ನಾಮವಾಗಲಿ, ಹಸ್ತವಾಗಲಿ, ಶಠಗೌಪ್ಯವಾಗಲಿ ಪ್ರಸ್ತಾವನೆಗೆ ತರದೆ, ಅದರ ವಿಷಯ ಇದುಯೆಂದು ತಿಳಿಸದೆ, ದೇವರಿಗೆ ಸಂಬಂಧವಿಲ್ಲದ ವಿಷಯಗಳನ್ನು ಸಂಪ್ರದಾಯಗಳೆನ್ನಬಹುದಾ? ದೇವಾಲಯಗಳ ರಹಸ್ಯಗಳು ತಿಳಿಯದವರು ದೇವಾಲಯ ಸಂಪ್ರದಾಯಗಳನ್ನು ಕುರಿತು ಮಾತನಾಡುವುದು ವಿಡ್ಡೂರವಲ್ಲವಾ? ತಮಗೆ ಮೆಚ್ಚುಗೆಯಾದ ಬರಹಗಳನ್ನು ಶಾಸ್ತ್ರಗಳೆಂದು ಹೇಳಿ ಆಲಯಗಳೊಳಗಿನ ದೈವ ಧರ್ಮಗಳನ್ನು ವಿಸ್ಮರಿಸಬಹುದಾ! ಧರ್ಮಗಳು ಸಂಪ್ರದಾಯಗಳು ಅತ್ತ ಪ್ರಜೆಗಳಿಗೂ, ಇತ್ತ ಪ್ರಭುತ್ವಕ್ಕೂ ತಿಳಿದಿಲ್ಲವಾದ್ದರಿಂದ ಯಾರೂ ಸಂಸ್ಕೃತ ಪಾಂಡಿತ್ಯವನ್ನು ತೋರಿಸಿದರೆ ಅವರದೇ ನಿಜ ಸಂಪ್ರದಾಯವೆಂದುಕೊಳ್ಳಬಲ್ಲರು. ಸಂಸ್ಕೃತ ಒಂದು ಭಾಷೆಯೆಂದು, ಅದರಲ್ಲಿ ಹೇಳಿದವುಗಳೆಲ್ಲಾ ಸತ್ಯವಲ್ಲವೆಂದು ತಿಳಿಯದೇ ಹೇಳಿದ್ದೆಲ್ಲಾ ನಿಜವೆಂದು ಕೊಳ್ಳುತ್ತಿದ್ದಾರೆ. ಕೇಳಿದ ವಿಷಯದಲ್ಲಿ ಶಾಸ್ತ್ರ ಬದ್ಧತೆ, ಹೇತು ಬದ್ಧತೆ ಇದೆಯಾ ಇಲ್ಲವಾ ಎಂದು ಯೋಚಿಸುವ ಸ್ಥಿತಿಯಲ್ಲಿ ಅವರು ಇಲ್ಲ. ಯಾವ ಪುರಾಣ ಹೇಳಿದರೂ ಕೇಳುವ ಸ್ಥಿತಿಯಲ್ಲಿದ್ದಾರೆ. ಆದ್ದರಿಂದ ಏನು ಹೇಳಿದರೂ ಸರಿ ಹೋಗುತ್ತದೆಂದು ಶಾಸ್ತ್ರ ಹೊಂದಾಣಿಕೆಯಿಲ್ಲದ ವಿಷಯಗಳನ್ನು ಪತ್ರಿಕಾಭಿಮುಖ ವಾಗಿ ವಿಧ ವಿಧವಾಗಿ ಹೇಳಿರುವುದನ್ನು ಅಲ್ಲಲ್ಲಿ ನೋಡಿದ್ದೇವೆ.

ಮತಗಳು ಮನುಷ್ಯರಿಗೆ ಹೊರತು ದೇವರಿಗೆ ಇಲ್ಲ. ರಾಜಕೀಯ ಪಾರ್ಟಿಗಳು ದೇಶದಲ್ಲಿನ ಪ್ರಜೆಗಳಿಗೆ ಹೊರತು ದೇಶದೊಳಗಿನ ಪದವಿಗೆ ಇಲ್ಲ. ಪದವಿ ಒಂದೇ ಇದ್ದರೂ ಪಾರ್ಟಿಗಳು ಅನೇಕ ಇದ್ದಂತೆ ದೇವರು ಒಬ್ಬನೇ ಆದರೂ ಮತಗಳು ಅನೇಕವಾಗಿ ಇರಬಹುದು. ಎಲ್ಲರೂ ಪದವಿಗಾಗಿ ಆಕಾಂಕ್ಷೆ ಇದ್ದಂತೆ ಎಲ್ಲರೂ ಮೋಕ್ಷವನ್ನು ಆಕಾಂಕ್ಷಿಸಬಹುದು. ಪದವಿಯನ್ನು ಕೋರುವವರು ಪದವಿಯ ಪವರ್ ಏನೆಂದು ಅದರ ವಿವರವನ್ನು ಮೊದಲೇ ತಿಳಿದಂತೆ ದೇವರನ್ನು ಹೊಂದಬೇಕೆನ್ನುವವರು ದೇವರ ಒಂದು ಸ್ಥಿತಿಗತಿಗಳ ಜ್ಞಾನವನ್ನು ಮೊದಲೇ ತಿಳಿದಿರಬೇಕು. ಎಲ್ಲ ಮತದವರು ಕೋರಿಕೊಳ್ಳುವುದು ದೇವರ ಸನ್ನಿಧಿಯನ್ನೇ ಆದ್ದರಿಂದ ಅವರವರ ಮತಗಳ ಪ್ರಕಾರ ದೇವರನ್ನು ಕುರಿತು ವಿವರಿಸಿ ಹೇಳಿ ಕೊಂಡಿದ್ದಾರೆ. ಇಂದೂ ಮತದಲ್ಲಿ ದೇವರನ್ನು ಕುರಿತು ತಿಳಿದುಕೊಳ್ಳುವುದಕ್ಕೆ ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಇತರ ಮತದವರು ದೇವಾಲಯಗಳನ್ನು ನಿರ್ಮಿಸಿಕೊಳ್ಳದೆ ಅವರವರ ಮತ ಗ್ರಂಥಗಳ ಮೇಲೆಯೇ ಆಧಾರವಾಗಿದ್ದಾರೆ. ಇಂದೂ ಮತದಲ್ಲಿ ಪೂರ್ವದಲ್ಲಿ ನಿರ್ದಿಷ್ಟ ಗ್ರಂಥ ಇಲ್ಲದಂತೆ ಪ್ರತ್ಯಕ್ಷ ಪ್ರಮಾಣಗಳಾಗಿ ದೇವಾಲಯಗಳನ್ನೇ ನಿರ್ಮಿಸಿದ್ದಾರೆ. ಸೃಷ್ಟಿಸಿದವರ ಉದ್ದೇಶ ದೊಡ್ಡದೇ, ದೇವಾಲಯಗಳಲ್ಲಿರುವ ಅರ್ಥಗಳು ದೊಡ್ಡವೇ. ದೇವಾಲಯಗಳು ದೇವರ ವಿವರವನ್ನು ತಿಳಿಸುವ ಪ್ರಮಾಣಗಳಾಗಿ ಇದ್ದರೂ ಕಾಲ ಕ್ರಮೇಣ ಅವು ಅಂತರಿಸಿ ಹೋಗಿವೆ. ದೇವರಿಗೂ ನಮಗೂ ಮಧ್ಯದಲ್ಲಿ ವ್ಯಾಪಾರ ಮಾಡುವ ಕೇಂದ್ರಗಳಾಗಿ ದೇವಾಲಯಗಳು ಬದಲಾಗಿ ಹೋಗಿರುವುದರಿಂದ ಮನುಷ್ಯರಲ್ಲಿ ಕೋರಿಕೆಗಳು ದೇವಾಲಯಗಳಲ್ಲಿ ಹುಂಡಿಗಳು ಬೆಳೆದುಹೋಗಿವೆ. ಇಂತಹ ಸಂಸ್ಕೃತಿ ಒಳ್ಳೆಯದಲ್ಲ ಎಂದು ನಾವು ತಿಳಿಸುತ್ತ ದೇವಾಲಯ ರಹಸ್ಯಗಳ ಬಗ್ಗೆ ಬರೆದಿರುವುದನ್ನು ನೀವು ನೋಡಿದ್ದೀರಲ್ಲವೆ! ದೇವಾಲಯಗಳಲ್ಲಿ ದೇವರಿಗೆ ಸಂಬಂಧಿಸಿದ ವಿವರವನ್ನು ಹೊರತುಪಡಿಸಿ ಬೇರೆ ಏನೂ ಇರಬಾರದೆನ್ನುವುದು ನಮ್ಮ ವಾದನೆ. ಆದ್ದರಿಂದ ದೇವಾಲಯಗಳಲ್ಲಿ ದೇವರ ಜ್ಞಾನಕ್ಕೆ ಸಂಬಂಧಿಸಿದ ವಿವರವನ್ನೇ ಈ ಗ್ರಂಥದಲ್ಲಿ ನೀವು ನೋಡಿರುತ್ತೀರ ದೇವಾಲಯದಲ್ಲಿ ಸಾಲಬಂಜಿಕೆ (ಬೆತ್ತಲೆ) ಚಿತ್ರಗಳನ್ನು ತಾಪೀ ಧರ್ಮರಾವ್ ಎನ್ನುವವರು ಬರೆದಿರುವ ಪುಸ್ತಕವನ್ನು ನಾವು ನೋಡಿದ್ದೇವೆ. ಯಾರ ಲೋಕ ಅವರದೇ ಎನ್ನುವಂತೆ ಆತನಿಗೆ ಎಲ್ಲಾ ಶೃಂಗಾರವೆಂದು ಕಾಣಿಸಿದೆ. ನಮಗೆ ಮಾತ್ರ ಎಲ್ಲವೂ ಜ್ಞಾನವೆಂದು ಕಾಣಿಸಿದೆ. ಈ ಪುಸ್ತಕವನ್ನು ಓದಿದ

ನಂತರ ನಿಮಗೆ ಜ್ಞಾನವೇ ಕಾಣಿಸಬೇಕೆಂದು ಕೋರಿಕೊಳ್ಳುತ್ತಿದ್ದೇವೆ. ತದನಂತರ ನಿಮ್ಮ ಬುದ್ಧಿಗೆ ಯಾವುದು ಸರಿಯೆನಿಸುವುದೋ ಜಾಗರೂಕತೆಯಿಂದ ನೋಡಿಕೊಳ್ಳಿರಿ.

**ಇಂತಿ,**

**ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**ಒಂದು ವಿಷಯವನ್ನು ಹೇಳುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೂ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಜನ ಹೇಳಿದರೂ, ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲಗಳೆದರೂ, ಅದು ಅಸತ್ಯವಲ್ಲ.**

Sakshi News pepar, 12-10-2015

# ‘ಹಿಂದೂ ಪದಕ್ಕೆ ನಿರ್ವಚನ ತಿಳಿದಿಲ್ಲ’

ಇಂಡೋರ್ : ರಾಜ್ಯಾಂಗ, ನ್ಯಾಯಪರವಾಗಿ ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧ ಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿ ಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀ ಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

# DEVAALAYA RAHASYAMULU

ಪ್ರಮುಖರ ಲೇಖೆ

Sakshi News 21-01-2014



## ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ